ಸಾಹಿತ್ಯ ಸೇವಾ ಸಮಿತಿಯ ಪ್ರಥಮ ಸುಮನ

# ಆಹ್ವಾನ

ನಾ. ಭಾ.

ಸಾಹಿತ್ಯ ಸೇವಾ ಸಮಿತಿ,
ಕೊಪ್ಪಳ

ಮುದ್ರಕರು:—
ಬಳವಂತ ನಾರಾಯಣ ಬಾಗಲವಾಡಿ
ಮೋಹನ ಮುದ್ರಣಾಲಯ,
ಧಾರವಾಡ.

ಬೆಲೆ ೦-೬-೦

ಪ್ರಕಾಶಕರು:-
ಸಾಹಿತ್ಯ ಸೇವಾ ಸಮಿತಿಯ ಕಾರ್ಯದರ್ಶಿ
ರಂಗನಾಥ ದಿವಾಕರ ಜೋಶಿ
ಕೊಪ್ಪಳ

# FOREWORD

This is Mr. **N. B. Shastry's 'AVHANA'** a playlet in free verse. Mr. Shastri has been distinguishing himself as a rising literary man for the last few years. His articles on rhetorics and literary criticism published in the journal of the Kannada academy have commanded wide consideration. Some of his child-lyrics and other poems have also been much appreciated.

Mr. Shastry's 'AVHANA' can be easily understood and appreciated. He has selected an episode from the MAHABHARATA and has presented it in an interesting manner. His style is simple though surcharged with reminiscences of the works of great poets like Bhatta-narayana. I am sure that the purport of the play will go home to many bosoms. And I trust that the encourage-ment given to his work will make Mr. Shastry express himself in a fullar and more ambitious manner.

28 th December, 33
Poona

**V. K. Gokak,**
Professor of English
Fergusson College
POONA

# ಪ್ರಕಾಶಕರ ನಾಲ್ಕು ನುಡಿಗಳು

ಭಾರತವರ್ಷದಲ್ಲಿ ಕರ್ನಾಟವು ಹೇಗೋ ಹಾಗೆ ಕರ್ನಾಟಕದಲ್ಲಿ, ನಮ್ಮೀ ನಿಜಾಂಕರ್ನಾಟಕವು ಸೌಷುಪ್ತಿಕ ದೇಶವು. ಇಲ್ಲಿ, ಜಾಗರಿಕ ಸ್ಥಿತಿಯನ್ನು ಕಾಣುವುದೆಂದರೆ, ವಿದ್ಯಾರ್ಜನೆಗಾಗಿ ಪರಪ್ರಾಂತಗಳಿಗೆ ಹೋಗಿಬಂದ ತರುಣ ವಿದ್ಯಾರ್ಥಿಗಳಲ್ಲಿ. ಹಿಂದಕ್ಕೆ, ಭಾರತದಲ್ಲಿ ಸ್ವಾತಂತ್ರ್ಯಸಾಧನಾ ಕಳಬಳವು ರಭಸದಿಂದೆ ಆಸೇತು ಹಿಮಾಚಲ ವ್ಯಾಪಿಸಿದಾಗ ಕರ್ನಾಟಕದಲ್ಲಿಯೂ ಪಸರಿಸಿ, ಸಮಾಜ ಸುಧಾರಣೆ–ಸಾಹಿತ್ಯ–ಕಲೆ–ಮೊದಲಾಗಿ–ನಟರಾಜನ ಡಮರುಧ್ವನಿಯಂತೆ–ಆ ಹುರುಪು ಪಾತ್ರಪರಿತು ಕಾರ್ಯೋನ್ಮುಖವಾಯಿತು. ಆ ಹಿರಿನೆರೆಯ ಆರ್ಭಟೆಯು ಮಲಗಿದ್ದ ಈ ಮೊಗಲಾಯಿಗರನ್ನು ಎಚ್ಚರಿಸದಿರಲಿಲ್ಲ. ಅದರ ಫಲವಾಗಿ ಈಗ ಹತ್ತು ವರ್ಷಕ್ಕೆ ಮುಂಚಿತವಾಗಿಯೇ–(ರುಧಿರೋದ್ಗಾರಿ ೧೮೪೫ ಜೇಷ್ಠ ೩೦) ಇಲ್ಲಿಯ ಗೆಳೆಯರ ಕಾರ್ಯದಲ್ಲಿ ಸಾಹಿತ್ಯ ಶಾಖೆಯೆಂದು–ಈ ಸಮಿತಿಯು ಪ್ರಸ್ಥಾಪಿತವಾಯಿತು. ಮೊದಮೊದಲಿನ ನಾಲ್ಕಾರು ವರ್ಷಗಳಲ್ಲಿ ಗ್ರಂಥ ಪ್ರಕಾಶದ ವಿಚಾರವು ಮನದಲ್ಲಿ ಮೂಡಿರಲೇ ಇಲ್ಲ. **'ಸಾಹಿತ್ಯ ಸೇವಕ'** ಎಂಬುದೊಂದು ಕೈಬ್ಬರೆಹದ ಪಾಕ್ಷಿಕವನ್ನು ಬರೆದು ಗೆಳೆಯರಲ್ಲಿಯೇ ಓದುವ ಹಾಗು ಬರೆಯಿಸುವ ಪರಿಪಾಠವಿಟ್ಟಿದ್ದಿತು. ಆ ಪತ್ರಿಕೆಗಾಗಿ ಬರೆದ ಕವಿತೆ, ಲೇಖನಗಳು 'ಸಾಹಿತ್ಯ ಪರಿಷತ್ ಪತ್ರಿಕೆ,' 'ಜಯಕರ್ನಾಟಕ' 'ಮಾತೃಭೂಮಿ' 'ಶ್ರೀಕೃಷ್ಣ ಸಂದೇಶ' 'ಸ್ವಧರ್ಮ' 'ಕಲಾ' 'ಕಥಾಂಜಲಿ' ಮೊದಲಾದ ಕರ್ನಾಟಕದ ಪ್ರಮುಖ ಪತ್ರಿಕೆಗಳ ಮೂಲಕ ಪ್ರಕಟಗೊಂಡಿವೆ.

ಪ್ರಕೃತದ ಆಡಳಿತದಲ್ಲಿ ಛಿನ್ನವಿಚ್ಛಿನ್ನವಾಗಿರುವ ಸಮಗ್ರ ಕರ್ನಾಟಕದಸಂಸ್ಕೃತಿ ಸಂವರ್ಧನವು ಸರ್ವಾಂಗಿಕ ಪರಿಪೂರ್ಣವಾಗಬೇಕಾದರೆ, ಆ ಆ ಅಂಗಗಳಲ್ಲಿಯ ಸ್ನಾಯುಗಳು ಬಲಗೊಳ್ಳಬೇಕು.

ಎಂದರೆಯೇ ಪೂರ್ಣದೇಹವು ಬಲವುಳ್ಳದುದಾಗುವುದು. ಈ ತೆರನಾಗ ಬೇಕಾದರೆ, ಆ ಆ ಸ್ಥಳಿಕರು ಕಾರ್ಯಶೀಲರಾಗಬೇಕು ಎಂಬುದನ್ನು ಮನಸಿಸಿ ನಾವಿಂದು ವಿಶಾಲ ಕರ್ನಾಟಕದ ರಂಗಸ್ಥಳಕ್ಕಿಳಿದಿದ್ದೇವೆ. ನಮ್ಮೀ ಕಾರ್ಯವು ಎಷ್ಟರ ಮಟ್ಟಿಗೆ ಯಶಸ್ವಿಯೋ! ಇದನ್ನು ಅಖಿಲಕರ್ನಾಟಕದ ಸಹೃದಯರೇ ಹೇಳಬಲ್ಲರು.

ನಮ್ಮೀ ಕಾರ್ಯ ಪ್ರವೃತ್ತತೆಯು ಅದೆಷ್ಟೋ ದಿನಗಳಹಿಂದೆಯೇ ಪ್ರಕಟವಾಗುವುದಿದ್ದು, ಸಹಾಯಶೂನ್ಯತೆಯಿಂದೆ ಹಾಗೆಯೇ ಉಳಿದಿತ್ತು. ಸಮಿತಿಯು ಗ್ರಂಥಪ್ರಕಾಶನದ ಸ್ವಪ್ನ ನಾಟಕವನ್ನು ನಟಿಸಿದಾಗೆಲ್ಲ ಆ ಆ ಸಂಪತ್ತಿಯುಕ್ತಿಯನ್ನೊದಗಿಸಿದ ಮಹನೀಯರಿಗೆಲ್ಲ, ವಂದನೆಗಳನ್ನೊಪ್ಪಿಸುವುದರ ಜೊತೆಗೆ ಕ್ಷಮೆಯನ್ನೂ ಯಾಚಿಸುವೆವು. ಪ್ರಕೃತದ ಈ ಪುಸ್ತಕವು ನಮ್ಮ ಪ್ರಾರ್ಥನೆಯ ಮೇರೆಗೆ ಬರೆದು ಸಿದ್ಧವಾಗಿ ಅದೆಷ್ಟೋ ದಿನಗಳಾದರೂ ಪ್ರಕಟನೆಯು ಸಾವಕಾಶವಾದುದಕ್ಕಾಗಿ ವಿಷಾದಿಸಬೇಕಾಗಿದೆ. ನಮ್ಮ ಮೇಲಿನ ಅಭಿಮಾನವುಳ್ಳ ಶ್ರೀಯುತರುಗಳಾದ **ಸಂಗಪ್ಪ ಅಣ್ಣಾ** ಮುದಗಲ್ ಶ್ರೀಮಾನ್ ನಾಟಕಾಲಂಕಾರ **ಸದಾಶಿವರಾವ ಗರೂಡ** ಹಾಗೂ ಶ್ರೀಮಂತ್ **ಪ್ರಲ್ಹಾದರಾವ ದೇಸಾಯಿ** ಮೇಣೆದಹಾಳ, ಸ್ನೇಹಬಂಧು **ವೆಂಕೋಬಾಚಾರ್ಯ** ಬಿಸರಹಳ್ಳಿ ಹಾಗೂ ಶ್ರೀಮಾನ್ ಡಾ. ಟಂಕಸಾಲಿ **ಬಿಂದೂರಾವ** ಇವರುಗಳೆಲ್ಲರ ಅಪರೋಕ್ಷವಾದ ಸಹಾಯವು ನಮಗಿಲ್ಲದಿದ್ದರೆ ಪ್ರಕಟನಾಕಾರ್ಯವು ಪ್ರಕಟಗೊಳ್ಳುತ್ತಿರಲಿಲ್ಲ. ಆದುದರಿಂದ ಅವರಿಲ್ಲಿ ಕೀರ್ತನೀಯ ಯೋಗ್ಯರು. ನಮ್ಮ ಅಡಚಣೆ ಆಪತ್ತಿಗಳನ್ನು ನೋಡಿ ದಯೆಯಿಂದೆ ನೆರವಾಗಿ ಸ್ವಲ್ಪೇ ದಿನಗಳಲ್ಲಿ ಅಂದವಾಗಿ ಮುದ್ರಣ ಮಾಡಿಕೊಟ್ಟ ಮೋಹನ ಮುದ್ರಣಾಲಯದ ಒಡೆಯರಾದ ಶ್ರೀಯುತ **ರಾಯದುರ್ಗ ಕೃಷ್ಣರಾಯರನ್ನು** ಇಲ್ಲಿ ನೆನೆಯದಿಲಾರೆವು.

ಶ್ರೀಮುಖದ
ಬನದ ಹುಣ್ಣಿವೆ
ಕೊಪ್ಪಳ

**—ಪ್ರಕಾಶಕರು**

ಅರಳಲಿರುವ 'ಸಾಹಿತ್ಯಸೇವಾ ಸಮಿತಿ'ಯ

ಸುಮನಗಳು.

**ಶಿಶುಗೀತೆ,**

**ಕಾವ್ಯಾಲೋಕ,** (ಕವಿಕಾವ್ಯ ವಿಷಯಕ ಪ್ರಬಂಧಗಳು)

**ಪ್ರದರ್ಶನ,** (ಗಾವಿಲರ ಜೀವನ ಪ್ರದರ್ಶನ)

**ತುಂತುರ,** (ಕವಿತಾಗುಚ್ಛ)

**ದತ್ತವಾಣಿ** (ವಿಮರ್ಶಾಪ್ರಬಂಧ)

**ಪ್ರಸನ್ನತೆ,** (ಒಂದುಬಾಳ್ಗತೆ,)

# ಅರಿಕೆ

ಅದೆಷ್ಟೋ ದಿನಗಳ ಹಿಂದೆ ಹೃದಯಾಂತರಾಳದಲ್ಲಿ ರೂಪುಗೊಂಡಿದ್ದ ಈ ರೂಪಕವು ಆಂಗಿರದ ಶಿಶಿರಋತುವಿನಲ್ಲಾರಂಭವಾಗಿ ಶ್ರೀಮುಖದ ವಸಂತ ಋತುವಿನ ಪ್ರಥಮ ದಿನದಲ್ಲಿ ಕೊನೆಗಂಡಿತು. ಈ ರೂಪಕದ ವಸ್ತುವು ನಾನೆಳೆಯನಿದ್ದಾಗ ಅಭ್ಯಸಿಸಿದ್ದ ಭಾರವಿಯ ಹಾಗೂ ಭಟ್ಟನಾರಾಯಣನ 'ಕಿರಾತಾರ್ಜುನೀಯ' 'ವೇಣೀಸಂಹಾರ'ಗಳಿಂದೆ ಪ್ರಸ್ಫುರಿತವಾಗಿದ್ದು, ಆ ಎಳೆಯತನದಲ್ಲಾದ ಅವುಗಳ ಸಂಸ್ಕಾರ ವಿಶೇಷದಿಂದೆ ಬಗೆಯೋಟ–ಭಾರವಿಯ ಆ ಭಾವ ನಿರ್ಭರತೆಯನ್ನೂ, ಭಟ್ಟ ನಾರಾಯಣನ ಬಂಧ ಕೌಶಲ್ಯವನ್ನೂ ಹಲವೆಡೆಗಳಲ್ಲಿ ಬೆಂಬತ್ತಿದುದರಲ್ಲಿ ಆಶ್ಚರ್ಯವೇನು?

ಇನ್ನು ಭಿನ್ನ ರುಚಿಗಳಿಗಾಗಿ ಮಾತು ಇಲ್ಲ. ಕಾಡಕಂಟಿಯು ದೇಕೆ ಹೂ ಬಿಡುವುದು? ವನಸಿರಿಯ ಸೊಬಗ ಹೆಚ್ಚಿಸಲೆಂದೊ! ಅದ ನಾರು ಬಲ್ಲರು! ಹೂಬಿಡಿಸುವುದು ಮಾತ್ರ ನಿಯತಿನಿಯಮ. ಅದ ನೋಡಿ ಯಾರಾರೊ? ಮೋದ ಪಡೆಯಲೂ ಬಹುದು. ಮೋರೆಯನು ಕಿವಚಲೂ ಬಹುದು ಹಲಕೆಲವರು. ಇದುವೂ ನಿಯತಿನಿಯಮ.

ಶ್ರೀಮುಖ-ದ್ವಿತೀಯಾ
ಕೊಪ್ಪಳ

ನಾ. ಭಾ.

ಗೆ:—

ಹೃದಯಾರವಿಂದ ವಾಸಿನಿ
ಮುದದಲಿನೀ ಪ್ರಣಯಮೂರ್ತಿ;
ಸೊಬಗಿನ ತೆನೆಯು
ಮೃದುಮಧುರ ಹಾಸ್ಯನಿಸಗಿದು
ಚದುರೆಯು ಹೊಳೆಹೊಳೆದು ತೋರ
ನವನವವಾಗಿ.

# ಆಹ್ವಾನ

—o—

## ಮೊದಲನೆಯ ಸ್ಥಾನ

ಅಂತಃಪುರದಲ್ಲಿಯದೊಂದು ಭಾಗ; ದ್ರೌಪದಿಯು ಚಿಂತೆಯಿಂದೆ ಮುಂಗಾಣದವಳಾಗಿ, ಶೂನ್ಯದೃಷ್ಟಿಯಿಂದೆ ಆಕಾಶದತ್ತ ದೃಷ್ಟಿಯನಿತ್ತು ಪ್ರವೇಶಿಸಿ:—

ಎಲೆ ದೇವದೇವ !
ದುಗುಡವೆನ್ನುವ ಗುಡುಗಿನಿಂದೆ
ಜರ್ಜರವಾದ, ಪಾಂಡುತನಯರ ನಯನ-
ವಾರಿವಾಹದಿ ಸುರಿವ ಬೆಂಬನಿಗಳಿಂದೇನು
ಕಟ್ಟಲೆಳಸುವೆಯಾ ! ಮತ್ತೊಂದ-
ಅಷ್ಟವಾಂಬುಧಿಯ ನೀನು !!
ದೇವ !
ಹಿಂದೆ ನಾವೆಂತೆಂತೆಯೊ ಕಷ್ಟಗಳ ಸಹಿಸಿದೆವು.
ಇಂದು ಧರ್ಮರಾಜ ಮತ್ತೆ ಅಂಧಪುತ್ರರ ಕಡೆಗೆ
ಶಾಂತಿಪ್ರಸ್ಥಾಪನೆಯ ನೆವದಿಂದೆ ಯಾಚನೆಗೆ
ಇಂದಿರಾವಲ್ಲಭನ ಕಳುಹಿ ಕೊಡುತಿಹನಂತೆ.
ಒಪ್ಪಿದನೊ ತಾನೆಂತು ಆ ದೇವ !
( ಹಿಂದಣಿಂದೆ ಕೃಷ್ಣಭೀಮರು ಬಂದು:— )
ಯಾದೇವನೊಪ್ಪಿದುದು ಯಾಜ್ಞಸೇನೀ ?

**ದ್ರೌಪದಿ:–** ಶರಣಜನ ಮಾನವನು
ಕಾಯುಲೆಳೆಸದೆ, ಅವರ ಪರಿತಾಪದಿಂ ಸಲಿವ
ಕಲ್ಲೆದೆಯು ದೇವ !

**ಕೃಷ್ಣ:–** ಏತಕಿಂತೀ ದುಗುಡ ದ್ರುಪದತನಯೇ ?
ತಿಳಿಯದಿರು ವಿಪರೀತ;
ನಡೆ ಕರೆವ ಧರ್ಮಜನು ಸಂಧಿವಿಗ್ರಹಕಾಗಿ.
ನಿಮ್ಮೆಲ್ಲರನುಮತಿಯು ತಿಳಿಯೆ ತವಕಿಸುವ.

**ದ್ರೌಪದಿ:–** ಕಜ್ಜವೇಂ ನನಗಲ್ಲಿ ?
ನಾನಬಲೆಯ್ಯೆನೆ !....
ಅನುಜರಿಹರಲ್ಲ !

**ಕೃಷ್ಣ:–** ಅಂತಲ್ತು.
ನೀನವರ ಅರ್ಧಾಂಗಿ, ಅಲ್ಲಿರಲು ಬೇಕು

**ದ್ರೌಪದಿ:–** ತಿಳಿಯೆ
ನಾನಿಂದೇಕೆ ಬೇಕು ಎಂಬುದನು.
ಪಣಕಿಕ್ಕಿ ಅರ್ಧಾಂಗಕಿರುವ ಮಾನವ ಸೂರೆ–
ಗೈವಾಗ, ಇರಲಿಲ್ಲೆ ಅದರ–
ಒಪ್ಪಿಗೆ ಪಡೆವ ಹವ್ಯಾಸ ?

**ಕೃಷ್ಣ:–** (ಸಂತಯಿಸುವ ದೃಷ್ಟಿಯನು ಬೀರಿ) ನಿನ್ನ ಬಗೆಯೀಗ
ಪರಿತಾಪದಾವಾಗ್ನಿಯಿಂದೆ ಬೆಂದುದಕೆ
ನಿನ್ನಲ್ಲಿ ನೀನಿಲ್ಲ. ನಡೆ ತಂಗಿ ?
ನಿನಗಾಗಿ....
ಒಳಿತೆ ಸಂಭವಿಸುವುದು !

---

# ಸ್ಥಾನ

## (೨)

ಏಕಾಂತ ಸಭಾಗೃಹ. ಧರ್ಮಜನು ಅಗ್ರಪೀಠದಲ್ಲಿ ಕುಳಿತಿದಾನೆ. ಬಲಕೆ ಶ್ರೀಕೃಷ್ಣ. ಉಳಿದವನ ತಮ್ಮದಿರು ಯಥೋಚಿತವಾಗಿ ಕುಳಿತಿದಾರೆ. ಕಿರೀಟಿ ಹಾಗೂ ವೃಕೋದರರ ಮಧ್ಯದಲ್ಲಿ ಕೊಂಚ ದೂರವಾಗಿರುವ ಒಂದು ಬಾಗಿಲಿನ ಹತ್ತಿರ ದ್ರೌಪದಿಯು ನಿಂತಿದಾಳೆ.

ಧರ್ಮಜನು ಹಿರಿಯರಿಗೆ ಉಚಿತವಾದ ಸ್ವರದಿಂದ:-

ಸೋದರರೇ ?

ಹದಿಮೂರು ವತ್ಸರಂಗಳ ಹಿಂದೆ, ಕೌರವಗೆ
ರಾಜ್ಯಲಕ್ಷ್ಮಿಯ ಸೋಲ್ದು, ವನವನವ
ಈರಾರು ವರುಷಗಳ ಪರ್ಯಂತ,
ದಿಕ್ಕೆಟ್ಟು ಅಂಡಲೆದು, ಮೇಲೊಂದು ವತ್ಸರವ
ಅಜ್ಞಾತದಿಂಗಳೆದು ಬಂದಿಹೆವು ಪೂರ್ಣಪ್ರತಿಜ್ಞರಾಗಿ.
ಕೌರವಗೆ ನಾನೇನು
ರಾಜ್ಯಲಕ್ಷ್ಮಿಯ ಕಡೆಗು ಸೋತಿಲ್ಲ.
ಪ್ರತಿಜ್ಞೆ ಪೂರಯಿಸಿ ಮರಳಿ ಬಂದೊಡೆ ನಮ್ಮ
ರಾಜ್ಯಲಕ್ಷ್ಮಿಯ ನಮಗೆ ಮರಳಿ ಬಿಡುವುದು ಎಂಬು
ಪಣದ ಕಟ್ಟಳೆ ಅಂದು.
ಅದಕಾಗಿ
ಚಕ್ರಿಯನು ಕೌರವನ ಕಡೆಗೀಗ
ಕಳುಹುವುದು ಅಭಿಮತವೊ ನಿಮಗೆ ?

**ಭೀಮ:-** ಕಳುಹಿ
ಮಾಡುವುದೇನು ?

**ಧರ್ಮ:–** ಏನಾತೊ

ಎಲೆತಮ್ಮ ? ಮರಳಿಹೆವು ನಾವಿಂದು
ಪಣವ ಪೂರಯಿಸಿ. ಆದಕಾಗಿ
ನಮ್ಮ ರಾಜ್ಯವನೆಮಗೆ ಬಿಡು ಎಂದು–
ಕೇಳ್ವುದಕೆ.

**ಭೀಮ:–** ಬಿಡದಿರೆ?

**ಧರ್ಮ:–** ನಮಗಾಗಿ ನಾಪಾಯ್ದು ಪೊಳಲೈದ ·
ಬಿಡು ಎಂದು, ಇಂತೆಲ್ಲವೊಲ್ಲದಿರೆ
ಕೊಳಗುಳಕೆ ನಿರ್ವಾಹವಿಲ್ಲವೆಂತೆಂದು....

**ಭೀಮ:–** (ಉದ್ವೇಗ ಸೂಚಕ ಸ್ವರದಿಂದೆ) ಅಣ್ಣಾ ?
ಕೈದುವನು ಮಸೆಯುವರೆ ಕುರಿಯ ಕೇಳಿ;
ಕ್ಷತ್ರಿಯರು ನಾವು
ಯಾಚನೆಯು ಬ್ರಹ್ಮವೃಂದದ ಸೊತ್ತು !!
ಭುಜಬಲದ ಬಲದಿಂದೆ ಗಳಿಸೋಣ
ನಮ್ಮದನು ನಾವು.

**ಧರ್ಮ:–** (ಶಾಂತತಾಮಯವಾಣಿಯಿಂದೆ)
ಸಾವಧಾನಿಸು ತಮ್ಮ ?
ದುಡುಕಬೇಡ.
ಶಾಂತಿಯಿಂ ಕಾರ್ಯಸಾಧಿಸುತಿರಲು,
ಕೊಳಗುಳದ ಸ್ಮರಣೆಯೇಕೆ ? ಅವಧಿ ತೀರಿದ ಬಳಿಕ
ನಮ್ಮದದು ನಮ್ಮದಲ್ತೆ !

**ಭೀಮ:–** ಅಂತಾದೊಡೀ ಶಾಂತಿಸಂಧಾನವೇಕೆ ?

**ಧರ್ಮ:–** ಕೇಳು
ಬರುವುದನು ಕೇಳದಿರೆ ಕೈಬಿಟ್ಟು ಹೋಗುವುದು.

ಕೇಳಗಲೆ ಕಾಳೆಗಕೆ ನಿಲ್ಲಲ್ಕೆ, ತಪ್ಪದದು ಜನನಿಂದೆ;
ಆದಕಾಗಿ,
ಅವರ ಮಾತನು ಇಂದು ಅವರಿಗೊಪ್ಪಿಸಿ ಮುಂದೆ
ಕಂಡುಕೊಳ್ಳಲು ಬೇಕು,
ಸಮ್ಮದನು ನಾವು.

**ಭೀಮ**:– (ನಿರುತ್ಸಾಹಯುತನಾಗಿ) ಅಣ್ಣಯ್ಯಾ.
ನಿನ್ನಯ ವಿಚಾರ ಸರಣಿಗಳದೆಂತುಟೋ–
ನಾನರಿಯೆ;
ಬಲ್ಲೆ ನಾ ಬಗೆಯ ಬಗೆಬಗೆಯ ಭಾವಗಳನು.
ಹದಿಮೂರು ವತ್ಸರಂಗಳ
ನಿರಾತಂಕದಿಂ ಭೋಗಿಸಿಹ ರಾಜ್ಯಲಕ್ಷ್ಮಿಯನಿಂದು,
ನಾವಿಂತು ಕೇಳ್ದೊಡನೆ ಕೊಡುವುದಕೆ ಪಡೆದಿಹನೆ
ಕೌರವನು ಕಪಟ ಜೂಜನ್ನಾಡಿ?
ಅರಿಯೆಯಾ
ಸಂಪದಾಭೋಗದೊಳು ಸಂತೃಪ್ತಿಯಿಲ್ಲದುದ?

**ಧರ್ಮ**:– ವತ್ಸ!
ಅರಿಕೆಯಿಂದೆಯಹುದು.
ಮನದಿ ಮುಂಡಿಗೆಯುಂಡು,
ಮಾಡಸಲ್ಲದು ಸಮರ, ಸಾಮದಾನದಿ ಮೊದಲು
ಮನಗಂಡು ಆ ಮೇಲೆ, ವಿಗ್ರಹವಿಚಾರ.
(ಈ ಎಲ್ಲ ಘಟನೆಗಳಿಂದ ವಿಹ್ವಲಳಾಗಿ)

**ದ್ರೌಪದಿ**:– ಎನ್ನಾಣ್ಮ?
ನಿಮ್ಮ ಈ ವಾಗಭ್ರದಿಂದೆ ಸುರಿದಿಹ ವಿಚಾರ–
ವಾರಿಗಳಿಂದೆ ನನ್ನಲ್ಲಿ ಉದಯಿಸಿದೆ ಬಗೆವೊಸಲು ಒಂದು.

## ಆಹ್ವಾನ

ಆ ಹೊಸಲ ನೀರೇನು
ಪಾನೀಯ ಯೋಗ್ಯವೋ, ಅಲ್ಲವೋ, ಎಂಬುದನು
ನೋಡಿ ನೀವು.

'ಕಜ್ಜವಿಂದೆ ನಿನಗಿಲ್ಲಿ ಬಾರೆ'ಂದು,
ಕರೆತಂದ ನನ್ನ ಶೌರಿ,
ನಾನಬಲೆ.
ನನ್ನ ಮಾತನು ಕೇಳಿ,
ನೀವು ಮೂಗುಮುರಿಯಲು ಬಹುದು.
ಅಂತಾದೊಡೆಯು ನಾನಿಂತು ತಿಳಿವೆ.
ಸಂತಾಪದಾವಾಗ್ನಿಯಿಂದೆ ಬೆಂದಿಹ ನನ್ನ,
ಅಂತರಂಗದ ಕೊಳೆತ ನಾತ, ನಿಮ್ಮಯ ಮೂಗ
ಮುರಿಸುವುದು ಎಂದು.
ಇವು ನನ್ನ ಸೊಲ್ಲುಗಳಲ್ಲ–
ನಾಪಟ್ಟ ಕಷ್ಟದಿಂ ಹೊತ್ತಿರುವ
ಒಡಲುರಿಯ ಕಿಡಿಗಳವು ಮೊಗದಿ ಹೊರ–
ಚೆಲ್ಲುತಿಹವು.
ಮಾಡಲೇಂ....? ಶಾಂತಿ!
ಎಲ್ಲಿಹುದು ಎಂತಿಹುದು ಆ ಶಾಂತಿ....!
ಕೈಪ್ಪಿಡಿದ ಅಬಲೆಯನು
ಖಳರು ಸಭೆಯೊಳು ಎಳೆದು, ಜಗ್ಗಾಡು
ತಿರುವಾಗ ಎಲ್ಲ ಶಾಂತಿಯೊಳಿತ್ತು.
ಆಗಾರಿಗೇನಾದುದು?
ತಾಯ್ತನದ ಜಾತಿಯ
ಆದೊಂದು ಹೆಣ್ತನದ ಮರ್ಯಾದೆ, ಪುರುಷ

ರೆಲ್ಲರ ಮುಂದೆ ಸೂರೆಯಾಯ್ತು.
ನೀವೆಲ್ಲ ಪುರುಷರೈಸೆ?
ನಿಮಗೇನು
ಹೆಣ್ತನದ ಮರ್ಯಾದೆಯರಿವು?

**ಧರ್ಮ:-** ದೇವೀ?
ನಿನ್ನಯ ವಚೋಲಹರಿ ನನ್ನಿಯನೆ ತೋರುತಿದೆ.
ನಾವಾಗ ವಚನಬದ್ಧರು.
ಏಗೆಯ್ಯುವಂತಿರ್ದೆವು?
ಉದಯೋಚ್ಛ
ರೋಷಮಯ ಬುದ್ಧಿಯಿಂ ಜನಿಸಿಹ
ತಮೋಮಯ ವಿಕಾರವನು ತ್ಯಜಿಸಿರಲು ಬೇಕು,
ಸಹಸಾ ಮಾಡಸಲ್ಲದು ಕಾರ್ಯ. ಅವಿವೇಕ
ವಾಪದದ ತವರೂರು.

**ದ್ರೌಪದಿ:-** ಅಹುದು ನನ್ನೊಡೆಯಾ?
ಅವಿವೇಕಮಾರ್ಗಪ್ರೇರಕಳು ನಾನಲ್ಲ!
ನಮಗೀಗ ಮುತ್ತಿರ್ದ ದುರ್ದೆಶೆಗೆ
ವಿಧಿಯು ಕಾರಣವಲ್ಲ!!
ಅದಕಾಗಿ-
ಬಾಯ ಬಿಡುತಿಹೆ ನಾನು!

**ಧರ್ಮ:-** ವಿಧಿಯಲ್ಲದಿನ್ನಾರು ಕಾರಣರು? ಅರಿಕೃತಿಗೆ
ವಿಧಿಯೆ ಪ್ರೇರಕಮಲ್ತೇ!

**ದ್ರೌಪದಿ:-** ಅಂತಲ್ತು ಎನ್ನಾಣ್ಮ?
ರಣವೆಂಬ ಗಗನದಲಿ ಉದಯಿಸುವ
ಅರಿಶೌರ್ಯರವಿಯಿಂದೆ ಮಂಕಾದುದಲ್ಲ ನಿಮ್ಮ

ಶೌರ್ಯಜ್ಯೋತಿ. ಅಂತಾದೊಡೆಯುಂ ಅಧಟರಿಗೆ
ಅದುವೆ ಉತ್ಸವವು !

**ಧರ್ಮ:–** ಎಂತೇನೊ ಬಂದಪುದು
ನಮಗೀಗ ಕೆಡುಗಾಲ ! ಶಾಂತಿಸ್ಥೈರಣೆಯಿಂದೆ
ಸಿದ್ಧಿಪಡೆಯಲು ಬೇಕು.

**ದ್ರೌಪದಿ:–** (ಕೆರಳಿ) ಇಳೆಯಾಣ್ಮ ?
ಮೌನಿಗಳು ಪಡೆಯುವರು ಸಿದ್ಧಿಯನು
ಶಾಂತಿ ಸ್ಥೈರಣೆಯಿಂದೆ; ಅಲ್ಲ ಕ್ಷತ್ರಿಯರು.
ಬೇಕೆದಕೆ ತೋಳ್ಬಲವು ?
ಶಾಂತಿಸ್ಥೈರಣೆಗಳೇ ರಾಜ್ಯಸಾಧಕಗಳೆನೆ
ಈ ಕಾರ್ಮುಕವದೇಕೆ?
ಭೂಪರೆಲ್ಲರು ಜಟಾಧರರಾಗಿ
ಮಿಗಿಲಲ್ಲೆ ಹೋಮಿಸುವುದಿನ್ನು !!

**ಧರ್ಮ:–** ಅಹುದು ದೇವೀ
ಇಲ್ಲಿ ಅಭಿಮತವು ನನಗೆ, ಸಮಯಸಾಧನೆಯುಂ.
ತಿಳಿಯಿದನು:–
ಸನ್ಮಾರ್ಗಗಾಮಿಯ ಅಧೋಗತಿಯುಂ,
ಏಳಿಗೆಯ ಸೂಚಕವು.

**ದ್ರೌಪದಿ:–** ಜನನಾಥ ! ಒಪ್ಪುವೆನು ನಾನು, ಈರೀತಿ
ಉಭಯ ಪಕ್ಷದ ನಡತೆ ತಾನಿರಲು.
ಒಂದೆಡೆಗೆ ಕೌಟಿಲ್ಯ ನೀತಿರಾಹಿತ್ಯವಿರೆ,
ಅದು ಎಂತೊ ಎದುರಾಳಿ ಸನ್ಮಾರ್ಗಗಾಮಿತ್ವ ?
ಅಲ್ಲ ಇದು ನೀತಿ;
ಕುಟಿಲರಿಗೆ ಕೌಟಿಲ್ಯವಮ್ಮಡಿಸಿ ತೋರುವುದೆ

ಸರ್ವ ಸಮ್ಮತದ ನೀತಿ!

**ಧರ್ಮ:-** ಭಾಪು!

ಪಾಂಚಾಲ ರಾಜತನಯೇ !! ಭಾಪು !!!

ಸಮಯಸಾಧಿಸಿ ಬಂದ
ಮೇಘವರ್ಷಣದಂತೆ, ಘನವಾದ ನಿನ್ನ ಈ ವಾಗ್ವೃಷ್ಟಿ
ನೆನೆಸಿಹುದು ಆನಂದದಿಂದೆ ನನ್ನ.

ಕೇಳು;
ತಾನೆಂತೊ ಬಲವಂತನಿರಲಿ, ಮಾಳ್ಪ ಕಾರ್ಯಗಳನ್ನು
ವಿಮರ್ಶಿಸಿಯೆ ಹಮ್ಮುವುದು ಒಳ್ಳಿತಲ್ಲೆ?
ಸಾವಧಾನದ ನಡಿಗೆ ಮುಗ್ಗರಿಪುದಿಲ್ಲಾ.

**ಭೀಮ:-** (ಅನುತ್ಸಾಹ ಸೂಚಕ ಸ್ವರದಿಂದೆ)

ಅರಿಗೆ ಬರಬಹುದಾದ- ಬರುತಿರ್ದ- ಎಡರೆಲ್ಲ
ನಿನ್ನಯ ಅನುತ್ಸಾಹ ವೃತ್ತಿಯಿಂ ದೂರಹವು ನೋಡು?

ಅಣ್ಣಾ? ಸಂಶಯವೆ ನಿನಗೆ?

ನಿನ್ನ ಈ ತಮ್ಮದಿರ-

ದೋರ್ದಂಡ ಭುಜದ ಬಲದಲ್ಲಿ!

**ಧರ್ಮ:-** ವತ್ಸ!

ನನ್ನ ಬಗೆ, ಅಂತು ಎಣಿಸಿದುದು ಅಲ್ಲ; ಬಂದಿಹವು
ಅಜ್ಞಾತ ವನವಾಸಗಳ ಕಳೆದು ಇದೆ ಈಗ.
ಒಡನೆ ವಿಗ್ರಹಕಾಗಿ ಅಣಿಯಾಗೆ, ಯಾರಿಹರು
ನಮ್ಮೊಡನೆ ಒಗೆದು ನೋಡು?

ನಮ್ಮ ಈ ಕ್ಷಾಂತಿದಾಂತಿಗಳಿಂದೆ
ಧಾರ್ತರಾಷ್ಟ್ರರ ಗುಣವ ಹೊರಗೆಡಹಬೇಕು.
ಆ ಮೇಲೆ ಹುಟ್ಟುವುದು ಅಲ್ಲಿ ಒಡಕು?

**ಭೀಮ**:– ನಾನೇನೂ ಒಪ್ಪಲಾರೆ.

ಅಣ್ಣಯ್ಯಾ ?

ಇದುವೆ ಕ್ಷಾತ್ರ ತೇಜದ ಸೊಲ್ಲೆ ? ನಿಜವಾಗಿ
ನಿನ್ನಮತಿ ಮಂಕು ಹಿಡಿದಿಹುದೇ–

ದ್ಯೂತವೇ ನೆಪವಾಗಿ !

ನೋಡೂ ?

ಈ ಯಾಚನೆಯು ಫಲವಾಗಿ, ಅರಿಯಿಂದೆ
ರಾಜ್ಯಲಕ್ಷ್ಮಿಯು ನೀನು ಹೊಂದಿದರು, ನಿಲ್ಲಳವಳೂ
ಯಾಚಕನ ಒಳಿಗೆ.

ತನಗಾಗಿ,

ತನ್ನ ತಾ ಮುಡಿಪಿಡುವ ಕಲಿಯುಳ್ಳವನ್ನರಿಗೆ
ಒಲಿಯುವಳೆ ಆ ಸಿರಿಯು !

ವೀರಸಿರಿಯಿಂದಲ್ಲದೇ
ಅವಳನಾಕರ್ಷಿಸಲು ಶಕ್ಯವೇ !

ಅಣ್ಣಯ್ಯಾ ?

ನೀನೆಂತು ಅಭಿಮಾನ ಶೂನ್ಯನಾದೈ !
ಕ್ಷಾತ್ರರಿಗೆ ಸಲ್ಲದೀ ರೋಷಶೂನ್ಯತೆಯು.
ಇಂತಿರುವಗಿಲ್ಲ ಜನಪದದ ಆದರವು;
ಮೇಣು, ವಿದ್ವಿಷಾದರವು ಇಲ್ಲ. ಇಂತಾಗಿ
ಆದರ ವಿಹೀನನಾಗುವದವನ ಬಾಳು.

**ಧರ್ಮ**:– ವತ್ಸ! ಅಂತಲ್ಲ

ಬಗೆದು ನೋಡು ?

ನೀನೆ ಒಪ್ಪುವೆಯಲ್ತೆ
ಗಾಂಧಾರೀಜರವಿನೀತರೆಂತೆಂದು ?

ತಿಳಿಯಿದನು:-
ಅನೀತಸಂಪದವು ಆಪದಾಗರವು.
ಶಾಶ್ವತವದಲ್ಲ.
ಅದಕಾಗಿ, ನಾವಿಂದು ಸುನೀತರಾಗೋಣ.
ಆ ಮೇಲೆ
ಅಂಧಪುತ್ರರ ನೀತಿರಾಹಿತ್ಯವನು ನಾವು
ಜಗಕೆಲ್ಲ ತಿಳಿಗೊಟ್ಟು, ನಮ್ಮಯ ಸುನಿಷ್ಕಪಟ
ವೃತ್ತಿಯಿಂದಿಳೆಗೆಲ್ಲ ಬೇಕಾಗಿ,
ನಮ್ಮ ಪದವನು ನಾವು
ಭದ್ರವಾಗಿರಿಸೋಣ?
ಏತಕಿಂತೀ ದುಡುಕು ಶಾಂತನಾಗು.

**ದ್ರೌಪದಿ:**- (ಉದ್ವೇಗದಿಂದ) ಪ್ರಭುವೇ?
ಶಾಂತಿಸಾಧನೆಗು ಸಹ ಸೀಮೆಯಿಹುದಲ್ತೆ?
ಮಾನಹಾನಿಯು ಸಮಯ ಬಂದಿದರು ಸುಮ್ಮನಿರಲು,
ಈ ಶುಷ್ಕ ಶಾಂತಿಯುರೆದಾಟವೇಕೆ?

**ಕೃಷ್ಣ:**- (ಪ್ರೌಢಿಮೆಯಿಂದ) ತಂಗೀ
ಅಧೀರಳಾಗದಿರು;
ನಿಯತಿ ನಿಯಮಕೆ ತಾನು ಭಾರವೆನಿಸುವುದೆಲ್ಲ
ನಶಿಸುವುದು ಎಂದೊಂದು ನಿಯಮತಾನಿಹುದು.
ಅದಕೇಕೆ ಕೊರಗು?

**ದ್ರೌಪದಿ:**- (ಉದ್ವೇಗವಶಳಾಗಿ) ಛೆ! ನಾನಿರುವುದೆಲ್ಲಿ!
ತಾಪಸರ ಪರ್ಣಶಾಲೆಯ ಒಳಗೋ!
ನಾನು ಕೇಳುವುದೇನು!! (ವಿಚಾರವಿಭ್ರಾಂತದಿಂದ)
ನಾನಲ್ಲ ಮೌನಯೋಗಿನಿಯು!

ಆಹ್ವಾನ

ರಣಕಾಗಿ

ಇಂದೇಕೆ ಹೆದರುವುದು ಈ ರಣಹೇಡಿ

ಕ್ಷಾತ್ರ ಸಂಕುಲವು !

ತಿಳಿಯದಿರಿ

ರಣಯಜ್ಞ ಮುಂದೆ ತಪ್ಪುವುದೆಂದು.

(ನಿಶ್ಚಯದ ಧ್ವನಿಯಿಂದ)

ಎನ್ನೆರಡು ಕೆಚ್ಚೆದೆಯ ಕಂದರೊಡಗೂಡಿ
ಸೌಭದ್ರ-ರಣದರಂಗದೊಳಿರಲು,
ಯಾರವರು ತಡೆವವರು !

( ಮೂದಲಿಪ ಸ್ವರದಲ್ಲಿ ಕೃಷ್ಣಂಗೆ:— )

ಓವೊ ಗೋಪಿಕಾ ವಲ್ಲಭ !
ಶಾಂತಿ ಸೂಕ್ತವನಿಂದು ಜಗಕೆಲ್ಲ,
ಉಪದೇಶ ಗೈಯ್ಯಲು ನೀನು ಹೊರಟಿರುವೆಯಲ್ಲೆ ?
ಪಾಪ ಆ ಶಿಶುಪಾಲ—ಬರಿದೆ ದೂಷಿಸಲು,
ತುಂಬಿದಾಸ್ಥಾನದಲಿ ಅವನ ನೆತ್ತರವೇಕೆ

ಸೂರೆಗೆಯ್ದೆಯೊ ನೀನು ?

ನಾನೊಪ್ಪೆ.... (ಪೂರ್ಣ ಆವೇಶವಶಳಾಗಿ:—)
ಬರಿದೆ ಈ ಬಾಯಿಂದೆ ಪುಸಿಹರಟುವರ್ಗೆ.

(ಕೊಂಚಹೊತ್ತಿನ ವಿಚಾರಾಂತ್ಯದಿಂದೆ)

ನನಗಲ್ಲದನ್ಯರಿಗೆ ಅಲ್ಲ; ಅವರು-

ಪ್ರತ್ಯರ್ಥಿಗಳು.

ನೀವೇನು ಮಾಡಲಾಪಿರಿ? ಅಬಲೆಯಾಶ್ರಯಿ—
ಸಿರ್ದ ಗಂಡುಮೆಟ್ಟದು ತಾನು—

ಬೆಂಡಾಯ್ತು ಇಂದು.

## ಆಹ್ವಾನ

ನಾನಂದು ಜನಿಸಿದೆನು ಯಜ್ಞಕುಂಡದಿ ಒರಿದೆ;
ನಾನಿಂದು ರಣಚಂಡಿ !
ಇಂದು ನಾನೇ ಇಹೆನು ರಣಯಜ್ಞ ಕುಂಡ !!
ನಿಮ್ಮ ಕಣ್ಗಳಿಗೆಲ್ಲ ಕಾಣಿಸುವುದಿಲ್ಲೇ ?
(ಹಿಂದೆ ಜೋಲಾಡುವ ಕೇಶರಾಜಿಯ ತೋರಿ)
ಈ ಘೋರ-
ಯಜ್ಞ ಧೂಮ ಸ್ತೋಮ !
ಇದುವೆ,
ನೋಡ ನೋಡುತೆ ಎಲ್ಲ, ಕೌರವ್ಯ ಕುಲವನ್ನು
ಧೂಮಮಯವಾಗಿಸುವುದು !

( ಆವೇಶಪೂರ್ಣ ಮತ್ತತೆಯಿಂದೆ ಸಂಭ್ರಾಂತಳಾಗಿ- )

ಯಾರಿಹಿರಿ ಗಂಡುಗೆಡದವರಿಲ್ಲಿ ?
ಹೊರ ಹೊರಟು ಬನ್ನಿ....
ರಣಚಂಡಿಯಾಜ್ಞೆ ಇಹುದು.
ಈ ಚರಣತಲದಲ್ಲಿ:-
ಅರಿಸಿರಃಕಮಲಗಳನೇರಿಸಲು ಬನ್ನಿ !
ಆರಾತಿ ರುಂಡಮಾಲೆಯನಿವಳ ಕಂಠಕ್ಕೆ
ತೊಡಿಸ ಬಯಸುವ ಗಂಡುಗೆಡದ ಪುಂಡರೆ ಇಲ್ಲಿ!
ತಮ್ಮ ಶಿರಕಮಲವನು ಕಯ್ಯ ತಟ್ಟೆಯೊಳಿಟ್ಟು
ಮುಂದೆ ಬಹ ಬಂಟರವರಿಹರೆ ಇಲ್ಲಿ?
ಇರಲವರು,
ಹೊರ ಹೊರಟು ಬನ್ನೀ—
ಇವಳೊಡನೆ ನರ್ತಿಸಲು,
(ವಿದ್ಯುದ್ವೇಗದಿಂದೆ ಹೊರಟು ಹೋಗುವಳು)

**ಭೀಮ:**– (ಇದೆಲ್ಲದರಿಂದ ಸಂಭ್ರಾಂತನಾಗಿ)

ಓರಣಚಂಡಿ ?

ನಿನ್ನ – ಕೋಪಾನಲ–ಜ್ವಾಲೆಗಳ ಪೆರ್ಚಿಸುವ,

ಈ ಚಂಡಮಾರುತನು

ತಾಂಬರುವ ನಿಲ್ಲು. (ಎಂದು ಬೆಂಬತ್ತುವ)

(ಶ್ರೀ **ಕೃಷ್ಣ** ಧರ್ಮಜರನ್ನುಳಿದು:—)

ಅಬ್ಬಾ ? ಏನು ಭೀಕರರೂಪ !!

ಯಜ್ಞಪುತ್ರಿಯು ತಾನು ತಾಳ್ದಿಹುದು !!!

**ಧರ್ಮ:**– (ದಿಙ್ಮೂಢನಾಗಿ) ಹೇ ವಿಶ್ವಪಾಲಕಾ ನೀನಲ್ಲದಿನ್ನುಂಟೇ.

ಈ ಧೂಮಕೇತುವನ್ನಡಗಿಸಲು ಬಲ್ಲವರು ?

---

## ಸ್ಥಾನ

### (೩)

**ಕ್ರೋಧೋದ್ವೇಗದಿಂದ ಉನ್ಮತ್ತನಾದ— ನಿಶ್ಚಯದ ಮುಖ
ಚರ್ಯೆಯುಳ್ಳ ವೃಕೋದರನು ಪ್ರವೇಶಿಸಿ:—**

ಎಲೆಗೇ
ಓ ಮತ್ತ ಭೈರವಿ !!
ಎಂಚೆಲ್ಲಿ ? ಮರೆಯಾದೆ ನಿಲ್ಲು ?
ಬೇಕು ಬೇಕಾದವರು ಮಾಡಿಕೊಳ್ಳಲಿ ಸಂಧಿ
ನನಗದರ ತೊಡಕಿಲ್ಲ.

ಅಗ್ರಜನು,—
" ಯಮಸೂನು " ಎಂತೆಂಬ ಹೆಸರಿಗೇ ಭಾರವಾಗಿಹನು

ಕುರುಕುಲದ, ನೂರೊಂದು ತರಗೆಲೆಯ—
ತೂರಿ ಹಾರಿಸಲು!
ಉದಯಿಸಿದೆ ನೋಡಿಲ್ಲಿ ?
ಪ್ರಬಲ ಝಂಜಾವಾತ !

ಇದಿಕೊ ಚಿತ್ತಯಿಸು ?
ತುಂಬಿದ ಸಭೆಯಲ್ಲಿ ಯಾರಂದು
ನಿನ್ನ ವಸ್ತ್ರವ ಹಿಡಿಯಲೆದೆಗೈದರೊ ?
ಮೇಣಂದು ನಿನಗಾರ ತೊಡೆಯು ತೋರಿದುದೊ
ಆ ಖಳನ ಎದೆ ಸೀಳಿ ಆ ಪಾಪಿ ತೊಡೆ ಮುರಿದು !!
ಪುಟಿವನೆತ್ತರವೀಂಟಿ, ಉಳಿದಿಹುದದರಲಿ ಎಂದು—

ಆಹ್ವಾನ

ಬಸಿವ ಹಸ್ತಗಳಲ್ಲಿ....
ಅಂದು ಆಂತಹ ಘಾಸಿಯಿಂದೆ
ಬಿಚ್ಚಿದ ನಿನ್ನ ಕುರುಳರಾಜಿಯ ನೆನೆಸಿ–
ಕಟ್ಟಿ ಕೂಡಿಸುವೆ !

ಇದುವೆ !
ಭೀಮನ ಭೀಮಪಣವು !!

ಎಲೆಗೆ ರಣಶಕ್ತಿ ?
ಹೊರಳೀಗ ಭೀಮಾಭಿಮುಖವಾಗಿ
ಬಾರೇ ? ಬೆಂಬತ್ತಿ ಭೀಮನನು. (ಹೋಗುವ)

———

ಸ್ಥಾನ

(೪)

ರಾಜಭವನದೊಳಗಣದೊಂದು ಬೀದಿ. ಉದ್ವೇಗೋನ್ಮಾದಿನಿಯಾದ
ದ್ರುಪದನಂದನೆಯು ಪ್ರವೇಶಿಸಿ,—

ಧಿಕ್ಕಾರ !
ಧಿಕ್ಕಾರವಿರಲಿ ಈ ಪೌರುಷ ಹೀನ ಜನಕೆ !
ಏನಿದೀ ವಿಪರೀತಕಾಲ !
ಅರಿಯುತಿಸುವಿಲ್ಲ !!
ವೀರರೊಳು ನೈಸರ್ಗವಾಗಿ,
ಪಾಸಿಸುವ ಗುರುತರದ ಅಭಿಮಾನಭಾಸ್ಕರನು,
ಐದಿದನೊ ಅಸ್ತವನ್ನು !!
ಧರೆಯೊಳಗೆ ಶೌರ್ಯಕ್ಕೆ
ತಾಣವಿಲ್ಲಂತಾಯ್ತೆ ! ನರರಲ್ಲಿ ಹೇಡಿತನ–
ವಿಂತಿಮೀರಿ ಮಿಗಿಲಾಯ್ತೆ; ಸರಿಯಾಯ್ತು ಸಲೆ ಜೀವ–
ಕೋಟಿ ಶವಮಯವಾಯ್ತೆ !
ಹೆಣ್ತನಕೆ ಗಂಡುತನವು !!!

(ಮನದಲ್ಲಿಯ ಕೆಲಹೊತ್ತಿನ ವಿಚಾರದಿಂದೆ ಏನೂ ತೋಚದಂತಾಗಿ.)

ಹಾಯ್ ಮಾಡಲಿನ್ನೇನು ?
ಎಲೆಗೆ ಓ ವೀರಲಕ್ಷ್ಮೀ?
ತೊಲಗಿ ಹೋಗೌ ನೀನು ಇಲ್ಲಿಂದ!
ಇದುವೆ ಆ ಜನನೆತ್ತ ಭರತವರ್ಷವು ಅಲ್ಲ !!
ಎಲೆಗೆ ಜಯಲಕ್ಷ್ಮೀ ?

ಆಹ್ವಾನ

ಹೇಡಿಗಳ ಬೀಡಿನೊಳು ನೀನಿರುವುದೇತಕ್ಕೆ ?
ಹೊರಹೊರಟು ಹೋಗು !!
ಎಲೆಗೆ ಸೌಭಾಗ್ಯಲಕ್ಷ್ಮೀ ?
ನನ್ನೊಡನೆ ಬಾ !
ಏನಿರುವುದೆಂದಿರುವಿರಿಲ್ಲಿ !!
ನಿಮಗೆಲ್ಲ ಇಲ್ಲವೇನೌ ? ಹೆಣ್ತನದ ಅಭಿಮಾನ !!
ನೀವೇನು ಅರಿಯಿರೇ
ಕೇಳಿರಿಲ್ಲಿ ?
ಆಗಿಹುದು ಮಾನಿನಿಯ–
ಮಾನ ಹಾನಿಯು ಇಲ್ಲೀ ?
ನೀವೆಲ್ಲ ಸ್ತ್ರೀಯರಲ್ಲೇ !
ತೊಲಗಿರೌ ಸ್ತ್ರೀಮಾನಭಂಗವಾದುದಕೆ ಪ್ರತಿಕಾರ–
ವಿಲ್ಲದಿಹ ನಾಡಿನಿಂದ.
ತೊಲಗದಿರೆ ಹೆಣ್ತನದ ಆಣೆ ಇಹುದು !
(ಮನದಲ್ಲಿ ಏನನ್ನೊ ನಿಶ್ಚಯಿಸಿ)

ಅಹುದು.

ಅಂದು ಆ ಸಭೆಯಲ್ಲಿ–
ಹೆಣ್ತನದ ಮರ್ಯಾದೆ ಇಂಗಿ ಹೋಯಿತು ಎಂದು
ವೀರಲಕ್ಷ್ಮಿಯು ತಾನು ಇಲ್ಲಿಂದೆ
ಹೊರಟು ಹೋಗಿರಬಹುದು !!
ಅದಕಾಗಿ ಈ ಜನವು
ಶವಕೆ ಸಮನಾಗಿಹುದು !!!
(ಮತ್ತೆ ಮನದಲ್ಲಿ ಏನೋ ವಿಚಾರಗಳು ಉದ್ಭವಿಸೆ ಸಂಶಯಿತ ಸ್ವರದಿಂದ)
ಏನು ?

## ಆಹ್ವಾನ

ವಿಶ್ವನಿಯಮವೆ ಇನ್ನು ಮುಂದೆ ಪಲ್ಲಟಿಸುವುದೆ?
(ಮತ್ತೆ ಮನದಲ್ಲಿ ವಿಚಾರ)
ಹೆಣ್ತನದ ಮರ್ಯಾದೆ ಕಾವುದನು ವಹಿಸಿತ್ತು
ಪುರುಷಗಣ ತಾನು ಬಹು ಹಿಂದಿನಿಂದ.
ನಾಶವಾಗಿದೆ ಇಂದು ಜಗದಲ್ಲಿ ಆ
ಪುರುಷಪೌರುಷವು.

ಮೇಣು ಪೌರುಷವಂತ ಆ ಪುರುಷಗಣವು
ಬಹುಕಾಲ ಜೀವಿಸಲು ಹವಣಿಸುತ್ತಿದೆ ಈಗ–
ಬಹು ಹೀನ, ದೀನನಂತಾಗೀ–
ತನ್ನ ಪಂಚಪ್ರಾಣ ಮಮತೆ ಇಂದ.
ಅದಕಾಗಿ ಇಂದು,
ಕಾಯ್ದುಕೊಳ್ಳಲು ಬೇಕು;–
ಹೆಣ್ತನವು ತನ್ನ ಮರ್ಯಾದೆಯನ್ನು !

(ಕ್ಷಣಹೊತ್ತಿನ ಸ್ತಬ್ಧತೆಯಿಂದೆ ಒಮ್ಮಿಗಿಲೆ ಎಚ್ಚತ್ತು:—)
ಆಹ ! ಮರತಿದ್ದೆ !!
ಕೈ ಹಿಡಿದ ಗಂಡಸರ–
ಸಿರಭಿಮಾನತೆಯಿಂದೆ, ಮೆಯ್ಮರೆತು !
ನಾನೇನು ಬಂಜೆಯಲ್ಲ!
ತನಯರೊಳು–
ಉದ್ದೀಪಿಸುವೆ ಅಭಿಮನ್ಯುವನ್ನು
ಆ ಮೇಲೆ ಈ–
ಭಾರತಿಯ ಸಂಗರಾಹ್ವಾನ !!!

(ಉದ್ಬೋಧಕ ಸ್ವರದಿಂದೆ)

## ಆಹ್ವಾನ

ಓ ಎನ್ನ ಮಕ್ಕಳಿರ!
ಇರುತಿದೆಯೆ ಅಭಿಮಾನವೆಂಬ
ಜ್ಯೋತಿಯ ಕಿಡಿಯು ಅಲ್ಪವಾದರು
ನಿಮ್ಮ ಬಳಿಯಲ್ಲಿ ಈಗ?
ಇರುತಿರಲು ಆ ಕಿಡಿಯು
ಹೊತ್ತಬಹುದೇ? ಹೊತ್ತಲಿಕೆ ನಿಮ್ಮಲ್ಲಿ-
ಶೌರ್ಯವೆನ್ನುವ ಸೌದೆ ತಾನು ಇಹುದೇ-
ಇದ್ದವರು ಎದ್ದು ಬನ್ನಿ!

ನಿಮ್ಮ ಮಾತೆಯು-
ಭಾರತಿಯು ಗತಮಾನಳಾಗಿಹಳು.

ತುಂಬಿಹುದೊ-
ಯಾರ ನಾಡಿನಾಡಿಗಳಲ್ಲಿ ಈ ತಾಯಿ-
ಭಾರತಿಯ ರಕ್ತ!

ಕೊಬ್ಬಿಹುದೊ ಯಾರಮೈಯ್
ಈ ಎದೆಯ ಸೆಲೆಯ ಸವಿದು!
ಇರುತಿಹುದೆ ನಿಮ್ಮಲ್ಲಿ ತಾಯ್ತನದ ಅಭಿಮಾನ?
ಇದ್ದರಿದೊ ಎದ್ದು ಬನ್ನಿ!
ತಾಯ್ತನದ ಮರ್ಯಾದೆ ಸೂರೆಹೊಯ್ಯಿದ-
ಭಂಡರನು ಮುರಿದಿಕ್ಕಲು,
ಸಂಗರಕೆ ಸಜ್ಜಾಗೆ ಈ ಮಾತೆ ಭಾರತಿಯ
ಆಹ್ವಾನವಿಹುದು.
ಏಳೇಳಿರೀಗ!!!

---

## ಸ್ಥಾನ

## ( ೫ )

ಹಿರಿಯರಲ್ಲಾದ ಬಡಿದಾಟದಿಂದ ಏನೂ ತೋಚದಂತಿರುವ
ಎಳಮೊಗದ ಸಹದೇವನು ಪ್ರವೇಶಿಸಿ:—

ಹೋದರೆಲ್ಲಿಗೊ ಇವರು–
ಉದ್ವೇಗಜೀವಿಗಳು !!
ನಿಶ್ಚಯದ ಧೋರಣೆಯು
ಅವರ ಮುಖದಲಿ ಆಗ ನರ್ತಿಸುತಲಿತ್ತು !

ನಿಜವಾಗಿ ಬಿಡರವರು
ಕುರುಕುಲಧ್ವಂಸಿಸದೆ.
ಎನಿತು ಸೈರಣೆ ನಮ್ಮ ಹಿರಿಯ ಅಣ್ಣನದು....
ಧೀರಪ್ರಶಾಂತನವನು.

ಆತನಿಗೆ ಇದಿರಾಡಲಾರದೂ ಎದೆ ಇಲ್ಲ.
ನಮ್ಮಲ್ಲಿ,
ಈ ಜೀವಯುಗಲವದು ಮಾತ್ರ
ಧಾರ್ತರಾಷ್ಟ್ರರ ಹೊಟ್ಟೆಯುರಿಯಿಂದೆ, ಮೊದಲಿಂದೆ–
ನೊಂದು ಬೆಂದಿಹುದು

ಅದಕಾಗಿ
ಅವನಿದಿರು ಮಾತನಾಡಿದರಿಂದು
ಮುಂದೆ ಏನಾಗುವುದೊ?

ಇತ್ತ !

ಆಹ್ವಾನ

ಶ್ರೀಕೃಷ್ಣ ಧರ್ಮರಾಜರ ರಾಜಕಾರಣವೇನೋ?
ಬಲ್ಲವರು ಯಾರು?

( ಕೆಲಹೊತ್ತು ವಿಚಾರದಲ್ಲಿ ನಿಂತು- )

ಈಗ ನಾನೇನೋ
ಗುರುಜನಗಳಿಂದೆ ಪ್ರೇಷಿತನು, ಆ ಪ್ರಕ್ಷುಬ್ಧ-
ಹೃದಯಿಗಳ ಸಂತಯಿಸಲು.

ಮತ್ತೆ ಕೆಲಹೊತ್ತು ವಿಚಾರದಲ್ಲಿದ್ದು, ಮುಂದೆ ನೇಪಥ್ಯದಲ್ಲಿ
ಏನನ್ನೋ ಕಂಡಂತೆ ಬೆದರಿ )

ಅಬ್ಬ! ಯಾರಿವರು?
ಪ್ರಳಯ ತಾಂಡವಮೂರ್ತಿ! ಉರಿಯುಗುಳ್ವ
ಕೆಂಗಣ್ಣು! ನೋಡಲೆನೆ ಬಿರಿವಂಥ ಅತಿ ಭಯಂಕರ ರೂಪ!!

(ಕೆಲಹೊತ್ತು ನೋಡಿ ವಿಚಾರದಿಂದೆ ಗುರುತಿಸಿ)

ಇವನೆ ಅಲ್ತೇ?
ಆ ಕುರುಕುಲಾಂತಕ ಭೀಮ!
ಇವನಿಗಿನ್ನೂ ದೊರಕಿದಂತಿಲ್ಲ
ಆ ರಣತೃಷ್ಣೆ—ಕಷ್ಣೆ?

( ಮನದಲ್ಲಾಗುತ್ತಿದ್ದ ಹೊಯ್ದಾಟವನ್ನು ತಡೆದು )

ಜೀವಿಸೆನು! ನಾನೀಗ ಮುಂದಾಗೆ! ಕೊಂಚ
ತೆರೆಗಾಗುವೆ, ಆಮೇಲೆ— ಸಮಯ ಸಾಧಿಸಿಕೊಂಡು
ಕಂಡುಕೊಳ್ಳೋಣ!

( ಹೋಗುವನು )

ಸ್ಥಾನ

( ೬ )

ಎಲ್ಲೆಲ್ಲಿ ಹೋದರೂ ಈಪ್ಸಿತವಸ್ತುವು ಕಾಣದ ಹಾಗಾಗೆ ವಿಹ್ವಲನೂ
ಉನ್ಮಾದಿತನೂ ಆದ ವಾಯುನಂದನನು
ಪ್ರವೇಶಿಸಿ–

ಎಲೆಗೆ ಸೌದಾಮಿನಿ
ಕುರುಕುಲದ ಕೊಳಚೆಯನು ಕೊಚ್ಚೊಯ್ವ ಈ ಭೀಮ–
ಮೇಘಗರ್ಜನೆ ನಿನ್ನ ಕಿವಿಗೆ ಕೇಳಿಸದೆ?
ಮಾಯವಾಗಿಹೆ ಎಲ್ಲಿ?

ನೋವೀಗ? ಸಿಡಿಲೆರಗುತಿದೆ?
ಬಾ ಬೇಗ ಕೋಲ್ಮಿಂಚೆ?
ನಿನ್ನ ನರ್ತನೆಯಿಂದೆ ಅಲ್ತೆ ಹುರುಪು
ಈ ಭೀಮಮೇಘರಾಜಂಗೆ.

ಎಲೆಗೆ
ಓ ಮತ್ತೆ ಕಾಳವಸ್ತಿ?
ನೀನೆ ಧುಮ್ಮಿಕ್ಕುವುದು ಬೇಡ.
ಕುರುಕುಲದ ಸರದಲ್ಲಿ!
ನಿನ್ನ ಆ ಮುಕ್ತಶುಂಡಾಲದಿಂದೆದ್ದ ಈ–
ಭೀಮ ಘೂತ್ಕಾರದಿಂದ
ಆ ಸರದ ನೂರೊಂದು ಪಂಕಜಗಳೆಲ್ಲ
ಕೂಡುತಿವೆ ಸಂಕವನ್ನು!!

ಬಾ ಬೇಗ?
ಓ ರಣೋನ್ಮಾದಮತ್ತೆ.

( ಕೆಲಹೊತ್ತು ಎಲ್ಲೆಡೆಯಲ್ಲಿಯೂ ಹುಡುಕಿ– )

ಎಲ್ಲಿಯೂ ಕಾಣಿಸಳು ?
ಯಾವಕಡೆ ಮಾಯವಾಗಿಹಳೊ !!
(ಎಂದು ವಿಚಾರಿಸುವ ಅನಿತರೊಳು ಯಾರೋ ಕಂಡಂತೆ ತೋರಿ– )
ಯಾರಿವರು ? (ನಿಶ್ಚಯದ ಸ್ವರದಿಂದ)
ಆಹ! ಇಲ್ಲಿಹಳು !!
ಈ ಕೌರವ್ಯವಸದಾಹೆ !!! ( ಹತ್ತಿರ ಹೋಗಿ )

ಹೇ ಭೀಮ ರಣಶಕ್ತಿ,
ಕರುಣಿಸೌ ಕಿಂಕರಗೆ !
ಏತಕೀ ಮುನಿಸು?
ವಾಗ್ವರವ ನೀಡೆ !
( ಎಂದು ಮೊಣಕಾಲೂರಿ ಕೈಮುಗಿದು ಕೊಡುವನು )

**ಸಹದೇವ:–** (ಕಂಪಿತಸ್ವರದಿಂದ)

ಅಣ್ಣಾ ಏನಿದೀ ಪರವಶತೆ?
ಅರಿಯದಾದೆಯೆ ನೀನು ನನ್ನನ್ನು ??

( ಬೆದರಿದಂಥವನಾಗಿ ಶುದ್ಧಿಯಮೇಲೆ ಬಂದು )

**ಭೀಮ:–** ಯಾರು ?

ವತ್ಸ ಸಹದೇವನೇನು ?
ನೀನಿಲ್ಲಿಗೈತಂದುದೇಕೆ ?
ಜನಿಸಿದುದೆ ಈಗ ನಿನ್ನಲ್ಲಿ –
ನಿಜಭಾರ್ಯಾಭಿಮಾನ ?

ಅದಕಾಗಿ ಬಂದೆಯಾ? ಆ–
ಪೌನಿಜನ ಸಂದೋಹ ತೊರೆದು!!!
ಭಾಪು ಸಹದೇವಾ !
ನನ್ನೊಡನೆ ನಡೆಯೀಗ ಆಯುಧಾಗಾರಕ್ಕೆ

**ಸಹದೇವ:–** (ಮನದಲ್ಲಿ) ಅರ್ಜುನನೀಗ
ತನ್ನಲ್ಲಿ ತಾನಿಲ್ಲ.
ಬಗೆಬನವು ದಹಿಸಿ ಹೋಗಿದೆ;–
ರೋಷವಡವಾನಲದಿ।
ನಾನೀಗ ಪ್ರತಿಯಾಡೆ ಆ–
ಕೋಪಾನಲಜ್ವಾಲೆ ದಹಿಸೀತು ನನ್ನನ್ನು !!

**ಭೀಮ:–** ಏನು ಸಹದೇವಾ
ಮೂಕನಾಗಿರುವೆ!

**ಸಹದೇವ:–** ಇಲ್ಲ; ಅಣ್ಣಯ್ಯಾ!
ಈ ಹಾದಿ
ಶಸ್ತ್ರಸದನಕ್ಕೆ ಹೋಗುವುದೆ ಎಂದು,
ಮನದಲ್ಲಿ ಸಂಶಯವು ಜನಿಸಿರಲು,
ಮುಖದಿಂದೆ ಮಾತು ಬರಲಿಲ್ಲ–
ಇಷ್ಟೇ.

**ಭೀಮ:–** ಹೀಗೋ!
ಹೋಗುವುದಿದೆಲ್ಲಿ?

**ಸಹದೇವ:–** ಅದೊ ಕಾಣದೆ!
ಪಾಂಚಾಲಿಯ ಚತುಃಶಾಲೆ!

**ಭೀಮ:–** ಒಳಿತಾಯ್ತು.
ನಮಗೀಗ ಕಾಣಬೇಕಾಗಿಹುದು–
ಆ ವೀರ ಮಾನಿನಿಯ!

( ಕೆಲಹೊತ್ತಿನ ವಿಚಾರದಿಂದೆ )

ಸಹದೇವಾ ?

ಇದು ಅವಳು ಇರುವ ಹೊತ್ತೇ,

ಚತುಃಶಾಲೆಯ ಒಳಗೆ !

ಅಲ್ಲ;

ಅವಳು ಹೋಗಿರಬಹುದು ಶಸ್ತ್ರಶಾಲೆಯ ಕಡೆಗೆ.

ನಡೆ ಅತ್ತ;

ನಮ್ಮಂತೆ ಒಗೆದೆಯಾ ಅವಳನೇನು ?

**ಸಹದೇವ:**– ಹಾಗಾದರೀಗ ಇತ್ತಿಂದ ಹೊರಡೋಣ !

**ಭೀಮ:**– ಆಗಲಿ (ಕೆಲಹೊತ್ತಾದ ಮೇಲೆ ಏನನ್ನೋ ಜ್ಞಾಪಿಸಿಕೊಂಡು,-)

ವತ್ಸ !

ಆಗನಾವಲ್ಲಿಂದ, ಹೊರಪಡಲು ಏನಾಯ್ತು ?

**ಸಹದೇವ:**– ಆಗುವುದದೇನು ?

ಧರ್ಮಜನು ಅತಿ ಖಿನ್ನನಾದ. ಮುರಸ್ಫೈರಿ

ಯಾವುದನು ತೋರದಂತಿದ್ದ.

ಉಳಿದ ನಾವೇನು ? ಬಾಲಕರು !

( ಪುನಃ ಕೆಲಹೊತ್ತು ಸ್ತಬ್ಧನಾಗಿದ್ದು, ಆಮೇಲೆ ಸಹದೇವನ ಸೊಲ್ಲನ್ನು ನೆನೆಸಿಕೊಂಡು )

**ಭೀಮ:**– ಸಹದೇವಾ !

ಏನಂದೆ ? ' ಧರ್ಮಜನು ಖಿನ್ನನಾದನು ' ಎಂದೋ ?

( ಕೊಂಚ ಆವೇಶಹೊಂದಿ ) ಏನೂ

ಗೊತ್ತಿದೆಯೊ ? ಖಿನ್ನತೆಯು ಆ ನಿಮ್ಮ–

ಹಿರಿಯ ಅಣ್ಣನಿಗೆ ?

ನೋಡೂ ?

ಆ ತುಂಬಿದಾಸ್ಥಾನದಲಿ........ (ರೋಷಾವೇಶದಿಂದ
ತಲೆಕೊಡಹಿ) ಇಲ್ಲ.
ನಾನದನು ಉಚ್ಚರಿಸೆ, ನನ್ನ ನೆತ್ತರ ಕುದಿಯು ತೊಡಗುವುದು.
....ಹಾಗಾದ–
ನಿಜಭಾರ್ಯೆಯನು ನೋಡಿ, ಆತನಿಗೆ
ಖೇದವಾಗಲು ಇಲ್ಲ.

ನಾವೆಲ್ಲ ನೃಪಸುತರು ಕೆಂಚರಂತೆ ವನವನದೊ
ಳಂಡಲಿಯೆ ಖಿನ್ನತೆಯು ಇಲ್ಲ. ಮೇಣು–
ವೈರಾಟ ಸದನದಿ ನಾವು ಪಟ್ಟುದಕ್ಕೆ
ಅಲ್ಪವಾದರು ಇಲ್ಲ ಖಿನ್ನತೆಯು ಆತಗೆ.
ನಮ್ಮ ಜನ್ಮದಾದಿಯಿಂದಾಗಿ ಬದ್ಧವೈರರು ಅವರು !
ನಮ್ಮ ಅಸುಗಳಿಗಾಗಿ ಹಸಿದ ರಕ್ಕಸರವರು !!
ಇಂಥವರ ಕುಲದ ನಾಶಕ್ಕಾಗಿ ನಿಮ್ಮರಸ
ಖಿನ್ನನೇ !!!

**ಸಹದೇವ.**– ಅದು ಏನೊ ಹಿರಿಯನನ (ಮುಂದೆ ಮಾತಾಡಗೊಡದೆ)

**ಭೀಮ:**– ಬೇಡ
ಆ ಮಾತು ಮುಂದೆ.
ನೀನೇನು ಬಲ್ಲೆ
ಹುಟ್ಟುತಲೆ ನಡೆದಿಹುದು ಬದ್ಧವೈರತ್ವ
ಆ ಕುರುಕುಲದ ಕರುಗಳದು, ನನ್ನೊಡನೆ–
ಹಾಗೂ ದ್ರುಪದನಂದನೆಯು ಗೂಡ?
ನಿಮಗೇನು; ನಿಮ್ಮ ಅಣ್ಣನಿಗೇನು !
ನಮ್ಮದದು ನೈಸರ್ಗವಾದುದು.
ತಡೆಯು ಬೇಡ, ನೈಸರ್ಗನಿಯಮಕ್ಕೆ !

## ಆಹ್ವಾನ

( ಮತ್ತೆ ಕೆಲಹೊತ್ತಿನ ವಿಚಾರದಿಂದ ಕೆರಳಿ)

ಕೈ ಹಿಡಿದ ಮಾನಿನಿಯ
ಅಪಮಾನ ಶಾಂತಿಯಾಗುವ ವರೆಗೆ–
ನನಗಾರು ಗುರುಹಿರಿಯರಿಲ್ಲ.
ಸಹದೇವಾ !

ಇನ್ನೊಮ್ಮೆ ನಿಮ್ಮ ಅಣ್ಣನಿಗೆ
ನನ್ನ ಈ ವಿನತಿಯನು ಹೇಳು ಹೋಗು !
ಆ ಹೊತ್ತು ನಾನೇನೊ ;
ಗುರುಜನದ ಸಂಮುಖದಿ, ಅನುಚಿತದಿ ನಡೆದುಕೊಂಡೆ.
ವತ್ಸ ?
ದಿಕ್ಕಿಲ್ಲದಿರುವಂಥ ತಮ್ಮ ನಾಡಿನ ಒಬ್ಬ
ಮಾನಿನಿಯ ಮಾನವನು ನೃಪರು ಕಾಯಲುಬೇಕು.
ಇವಳಂತು, ನೃಪಸುತೆಯು;
ಇಂಥ ಈ ಮಾನಿನಿಯ ಮಾನಹಾನಿಯದೊಂದು,
ಪ್ರತಿಕಾರ ಪಂಥವನು ಪೂರಯಿಸಿ ಆ ಮೇಲೆ
ನಾ ಬಂದು ನಿಲ್ಲುವೆನು ಹಿರಿಯರಾ–
ಚರಣ ಸನ್ನಿಧಿಯಲ್ಲಿ.
ಆ ಮೇಲೆ ನನ್ನ ತಪ್ಪಿತಕೆ,
ಬೇಕು ಬೇಕಾದಂಥ
ಶೀಕ್ಷೆಯನು ವಿಧಿಸಲಿ, ನಾನದಕೆ ಸಿದ್ಧ
ನೋಡು ವತ್ಸ ?
ಮಾನಿನಿಯ ಮಾನರಕ್ಷಣೆಯು, ಕ್ಷತ್ರಿಯನ
ಆದ್ಯಕರ್ತವ್ಯವಲ್ಲೆ ?
ಅದಕಾಗಿ ಹೇಳು ಹೋಗು.

ಕ್ಷತ್ರಿಯೋಚಿತ ಕಾರ್ಯಸಾಧನೆಯ ಸಲುವಾಗಿ
ಹೋಗಿಹನು ನಿನ್ನ ತಮ್ಮ. ಖೇದಪಡಬೇಡೆಂದು–
ಆ ಧರ್ಮತನಯಂಗೆ

(ಕೆಲಹೊತ್ತಿನಲ್ಲಿ, ವಿಚಾರ ಪಲ್ಲಟದಿಂದ ಶಾಂತನಾಗಿ)
ವತ್ಸ ಇತ್ತ ಬಾ;
ಇನ್ನೊಂದ ಕೇಳುವೆನು.
ಯಾಚನೆಯದಾದರೂ ಏನೆಂದು ಇಹುದೋ
ನಿಮ್ಮ ಅಣ್ಣನದು ?

**ಸಹದೇವ**:– ವಾರಣಾವತಿ–ಇಂದ್ರ–ವೃಕ–ಪ್ರಸ್ಥಗಳ
ಜಯಂತವಿವು ನಾಲ್ಕು, ತಮಗೆ ತಿಳಿದದ್ದೊಂದು;
ಇನಿತೈದು ಪಟ್ಟಣಗಳನ್ನು ಕೇಳಿಹುದು.

**ಭೀಮ**:– ಹಾಯ್
ಎನಿತು ಅವನತಿ !
ಪುರುಷ ಪೌರುಷಕೆ !
ಆ ದೀಪ್ತ ಅಭಿಮಾನ ಜ್ಯೋತಿ,
ನಂದಿ ಹೋಯಿತೆ ಇಂದು ?

**ಸಹದೇವ**:– ಅಣ್ಣಾ,
ಗಾವಿಲನೊಲರ್ಥೈಸಿಕೊಂಡೆ ನೀನು
ಧರ್ಮಸಂದೇಶವನ್ನು !!

**ಭೀಮ**:– ಮೂಢಾ
ಮತ್ತಿದರೊಳೇನಿಹುದೊ ಅರ್ಥ !

**ಸಹದೇವ**:– ಹಾಗಲ್ಲ,
ಈ ಪ್ರತಿಪುರದ ಹೆಸರ ಹೇಳಿಕೆಯಿಂದೆ,
ಆ ವಿಷಾನ್ನಪ್ರದಾನ, ಲಾಕ್ಷಾಗೇಹದಹನ–

ದ್ಯೂತ– ಸಭಾದ್ಯಪಕಾರಗಳ ಸ್ಥಾನ–
ಗಳನವರ ಸ್ಮೃತಿಪಥಕೆ ತಂದು;
ಐದನೆಯದೊಂದರ ಹೆಸರನೆತ್ತದಿರುವಿಕೆಯಿಂದೆ–
ಉಳಿದಿಹುದು; ಈ ಪಂಚಕಕೆ
ಇನ್ನೊಂದು ಅಪಕಾರವೆಂದು ಮೂದಲಿಪುದಕೆ.

**ಭೀಮ**:– (ಬೇಸರದ ದನಿಯಿಂದ)
ಏನಾಯ್ತು ಇದರಿಂದ

**ಸಹದೇವ**:– ತಿಳಿಯದೇನೈ ಆರ್ಯ?
ಇದರಿಂದೆ!–
ಸಕಲ ಬಾಂಧವನಾಶಕೃತಿಗೆ ಹೇಸಿದ
ಮೃದು ಮನಪ್ರದರ್ಶನವಾಯ್ತು!
ಅಲ್ಲದೆಲೆ
ಬಾಂಧವವ್ಯೋತ್ಕರ್ಷದಲ್ಲಿದ್ದ, ಧಾರ್ತರಾಷ್ಟ್ರರ–
ಸಹನವಿಲ್ಲದ ಮನದ ಪ್ರದರ್ಶನವದೂ ಆಯ್ತು!

**ಭೀಮ**:– ವತ್ಸ ಇದರಿಂದೇನು?
ತೇಜಸ್ವಿ
ಪರೋತ್ಕರ್ಷಾಸಹಿಷ್ಣುವು! ಇದುವೆ,
ನಿಯತಿ ನಿಯಮಿತ ಧರ್ಮ.
ಇದರೊಳಿನಗೆ ಅಸ್ವಮತಿಯಿಲ್ಲ.
ನಾವೆಲ್ಲ ತೇಜ ಉಳ್ಳವರಾಗೋಣ;
ಓಜೆಯುಳ್ಳವರಾಗೋಣ;
ಅಂತೆಯೇ
ಆರಾತಿ ಉತ್ಕರ್ಷ ಅಸಹಿಷ್ಣುರಾಗೋಣ

## ಆಹ್ವಾನ

(ಎಂದು ಕೆಲಹೊತ್ತು ಸುಮ್ಮನಾಗಿ ಆ ಮೇಲೆ ಪುನಃ ಮೊದ
ಲಿನದನ್ನು ಜ್ಞಾಪಿಸಿಕೊಂಡು-)

ಅಲ್ಲವೊ ಮೂಢ?
ಅದೆಂದೋ ಆಗಿಹೋಗಿದೆಯಲ್ಲ; ಈ ಪ್ರದರ್ಶನ!
ಇಂದು ಮತ್ತೇಕೆ?
ನೋಡು ?
ನಿಮಗೆಲ್ಲ,
ಅರಿಕುಲಲಕ್ಷ್ಮಿಯ ಮಾತ್ರ, ಮನಕೆ-
ಹೇಸಿಕೆಯು-ನಾಚಿಕೆಯು ಕಾರ್ಯ!!
ಹೇಸಿಕೆಯುದಲ್ಲೇ-ನಾಚಿಕೆಯುದಲ್ಲೇ!
ಸಭೆಯಲ್ಲಿ ಹೆಂಡತಿಯ ಕೇಶಕರ್ಷಣವು!!!
ದೇವಾ?
ಇದೆಂತು ಅಭಿಮಾನಶೂನ್ಯತೆಯ ಕಾಲ ಬಂದಿತಿಂದು!

(ಇಷ್ಟರಲ್ಲಿ ಸಮರ ವೇಷಭೂಷಿತೆಯಾದ ದ್ರುಪದನಂದ
ನೆಯು ಹಿಂದಿನಿಂದ ಪ್ರವೇಶಿಸಿ-)

ಇದ್ದೇನು ಇದೆ ಅಹುದು
ಅಭಿಮಾನ ಜ್ಯೋತಿ
ಇನ್ನೂ ಈ ಭಾರತೀಯ ರಮಣಿಯಲ್ಲಿ!

(ಆನಂದೋತ್ಕಟದಿಂದ ಮತ್ತಳಾಗಿ ಕೆಲಹೊತ್ತು ಆನಂದಾನುಭವದಲ್ಲಿ
ಮಗ್ನಳಾಗಿದ್ದು ಆ ಮೇಲೆ—)

ಅಲ್ಲ ಇದು ಅದಕೆ ನಂದುವ ಕಾಲ!
ದೀಪ್ತವಾಗುವ ಕಾಲ ಪ್ರಾಪ್ತವಾಗಿದೆ ಇಂದು!!
ಆ ಜ್ಯೋತಿ ನಂದದಲೆ-
ದೀಪ್ತವಾಗಲಿ ಮತ್ತೆ ಪ್ರದೀಪ್ತವಾಗಲಿ! ಮತ್ತೆ ಮತ್ತೆ.

**ಭೀಮ:–** ಯಾರು ?
ಕೌರವ್ಯರುಧಿರತೃಷ್ಣೆ–ಕೃಷ್ಣೆಯೇ ? (ಎಂದು ದ್ರೌಪದಿಗೆ
ವಿಮುಖನಾಗಿದ್ದವನು ಹಾಗೆಯೇ ನಿಲ್ಲುವನು)

**ದ್ರೌಪದಿ:–** ಅಹುದು
ಆ ರಣತೃಷ್ಣೆಯಿವಳು (ವೃಕೋದರನು ಅಭಿಮುಖ
ನಾಗದೇ ಇರುವುದನ್ನು ಕಂಡು)
ಪ್ರಿಯಕರಾ ?
ಮುನಿಸೇ ?
ಈ ನಿನ್ನ ಚರಣದಾಸಿಯ ಮೇಲೆ?
ವಿಮುಖತೆಯಿದೇತಕ್ಕೆ
ತೋರು, ಆ ನಿನ್ನ ಭೀಮಮುಖವ ?

**ಭೀಮ:–** ತೋರಿಸನು ಈ ಭೀಮ
ಈ ಕೃಷ್ಣಮುಖವ.
ಆ ನೀಚ ಜೀವಿಗಳತಪ್ತಶೋಣಿತ ಸ್ನಾತ–
ಆರಕ್ತ ಮುಖವನಲ್ಲದಲೆ
ತೋರಿಸನು
ಈ ಕೃಷ್ಣಮುಖವನೀ ಭೀಮ.

**ದ್ರೌಪದಿ:–** (ಈ ವಾಕ್ಕಿನಿಂದೆ ಹರ್ಷೋನ್ಮಾದಿನಿಯಾಗಿ)
ನಾನೀಗ ನೋಡುತಿರುವುದಿದೇನು ?
ಕೇಳುತಿರುವುದಿದೇನು ?
ನನಸೆ ಇದು
ಕನಸಲ್ಲನೇ ?
ಪ್ರಾಣೇಶಾ ?
ನುಡಿ ನಿನ್ನ ಆ ನುಡಿಯ ಸಹಸ್ರ ಸಲ ಇನ್ನು

ಅಲ್ಲ– ಕೋಟಿಸಲ,– ಪರಾರ್ಧ ಪರಾರ್ಧ ಸಲ–!!
ನನಗಿಲ್ಲ ತೃಪ್ತಿ ಅದನು ಕೇಳ್ವುದಕೆ!
ಈ ನನ್ನ ರೋಮ ರೋಮದೊಳೆಲ್ಲ ಬಿಂಬಿಸಿ
ಪ್ರತಿಧ್ವನಿಗೈಯ್ಯಬೇಕು
ಆ ನಿನ್ನ ವಚನ!–
ಎನೆ ನನಗೆ ನನಸಾಗಿ ಕಂಡೀತು!

ನುಡಿ ಒಮ್ಮೆ!
ಮುನ್ನೊಮ್ಮೆ–ಮತ್ತೊಮ್ಮೆ– ಇನ್ನೊಮ್ಮೆ ಕೇಳುವೆನು,
ಎಷ್ಟುಸಲ ಕೇಳಿದರು ತೃಪ್ತಿ ಇಲ್ಲದೆ ಇಹುದು!
ಕುಡಿಸು ಇನ್ನೆಷ್ಟೊ ಸಲ; ಈ ಕರ್ಣಯುಗಲಕೆ–
ನಿನ್ನ ವಾಕ್‌ಪೀಯೂಷವ!!!

(ನೇಪಥ್ಯದಲ್ಲಿ ಮಹಾ ಕಲಕಲ ರವವು ಕೇಳ ಬರುವುದು)

**ಭೀಮ:–** ಏನಿದೀ ಘನಘೋರ–
ಕಲಕಲ ಧ್ವನಿಯು, ಪ್ರಳಯಕಾಲದ ಮೇಘ
ಗರ್ಜನೆಯು ತೆರದಿಹುದು. (ಕಿವಿಗೊಟ್ಟು)

ಇದು ಏನು?
ದುಂದುಭಿಯು ನಿನದಿಸುತ್ತಿಹುದು!
(ವಿಚಾರಯುಕ್ತ ವಾಣಿಯಿಂದ)
ಏನು? ರಣಕೆ ಆಹ್ವಾನವಿಹುದೋ?
(ತನ್ನ ಎರಡೂ ಭುಜಗಳನ್ನು ನೋಡಿ– ತೋರಿ–)
ನೋಡಿದೋ? ನನ್ನ ಈ ಭುಜಯುಗಲ–
ಸ್ಫುರಿಸಹತ್ತಿದವು!!
(ಪುನಃ ನೇಪಥ್ಯದೆಡೆಗೆ ಕಿವಿಗೊಟ್ಟು–)
ಕಲಕಲವು ಹೆಚ್ಚಾಯ್ತು! ಮುಂದರದಿ–

ಪಾಲ್ಗಡಲ ಗಡೆವಾಗ ಜನಿಸಿರ್ದ ಆ–
ಘೋರ ಧ್ವನಿಯಂತೆ,
(ಪುನಃ ಕೆಲಹೊತ್ತು ವಿಚಾರದಲ್ಲಿದ್ದು–)
ಇದುವೆ ಈ ರಣತೃಷ್ಣೆ ಕೃಷ್ಣೆಯು ಪಿಪಾಸೆ–
ಹಿಂಗುವುದದೆಂಬ ಶುಭಸೂಚಕ ಧ್ವನಿಯೊ !
ಇಂತಾದೊಡೇನು ಕೇಳುವುದು ?
(ದ್ರೌಪದಿಗೆ)

ಎಲೆಗೆ ರಣಚಂಡೀ ?
ಇದೊ ನೋಡು ?
ನಿನ್ನ ಈ ಸಲ್ಮೆಯುದಾಸ ಸಿದ್ಧನಿರುವಾ
ಅರಿಸಿರಃಕಮಲಗಳನೇರಿಸಲು, ನಿನ್ನ ಈ ಚರಣಕ್ಕೆ !
(ಧಾವಿಸುತ ಕಂಚುಕಿಯು ಬಂದು,—)
ದೇವ, ಅದು ನೋಡು, ಭಗವಾನ್ ವಾಸುದೇವ
(ಆತುರದಿಂದ ಎಲ್ಲರೂ)
ಎಲ್ಲಿ ಆ ಭಗವಂತ !

**ಕಂಚುಕಿ:–** ಅಲ್ಲ ಽ
ಪಾಂಡವರ ಪಕ್ಷಪಾತಿಯುಂ ಎಂಬ ಕಾರಣದಿ
ಆತನನು ಬಂಧಿಸಲು ಅನುವಾದನಾ–
ಫಣಿರಾಜ ಕೇತನನು !

**ಭೀಮ:–** ಏನು !
ಬಂಧಿಸಿದನೇ ?

**ಕಂಚುಕಿ:–** ಇಲ್ಲ
ಬಂಧಿಸಲು ಬಗೆದ !!

(ಆತುರದಿ ಎಲ್ಲರೂ)

ದೇವನೇಗೈದನಾಗ ?

**ಕಂಚುಕಿ:-** ಆಗಲಾ ಮಹಾತ್ಮ

ವಿಶ್ವರೂಪವತಾಳ್ದ !

ಎಲ್ಲವೂ ಕೃಷ್ಣಮಯವಾಯ್ತು

ಆಗ ಬಂಧಿಸುವುದಾರನ್ನು

ಈಗ ಆ ದೇವ

ಬಂದಿಹನು ಇಲ್ಲಿ, ನಿಮ್ಮನ್ನು ಕಾಣಲಿಕೆ–

ತವಕ ಬಡುತಿರುವ ।

**ಭೀಮ:-** ಹೀಗೋ

ಆ ದುರಾತ್ಮ ?

ಭಗವಂತನನ್ನೂ ಬಂಧಿಸಲು ಬಗೆದನೇ !

ಆಹ !

ಎಲವೊ ಕುರುಕುಲದ ಕುನ್ನಿ ? ನಿನ್ನ ನಾಶಕ್ಕಾಗಿ

ಈ ಪಾಂಡುತನಯರ ಕ್ರೋಧ

ಬರಿ ನಿಮಿತ್ತ ಮಾತ್ರವು ತಾನು !!

ನಿನ್ನಯ ದುರಾಚಾರ ನಿನ್ನನ್ನೆ ಕೊಲ್ಲುವುದು !!

**ಸಹದೇವ:-** ಅಣ್ಣಾ,

ಈ ಮಹಾತ್ಮನ ಸ್ವರೂಪವನ್ನರಿಯನೇ–

ಆ ದುರಾತ್ಮ ?

**ಭೀಮ:-** ವತ್ಸ ?

ಮೂಢನವ ನಿಶ್ಚಯದಿ,

ಎಂತು ? ತಿಳಿವ;

ಜ್ಞಾನ ಸೂರ್ಯೋದಯದಿ ಉನ್–

ಮೀಲನೆಯು ಹೊಂದಬಹುದಾದಂಥ ಒಗೆ ಎಂಬ
ದಾವರೆಯೆ ಪೀಠವಾಗಿರುತಿರ್ದ, ಆ ಸಚ್ಚಿದಾನಂದ
ಮೂರುತಿಯು ಪರರೂಪ ಅರಿವರೇ ಈ–
ಮೋಹಾಂಧ ಕೌರವರು ?
ತರಗೆಲೆಗಳನ್ನುಂಡು
ಆತ್ಮರತಿಯಲಿ ರಮಿಪ ಸಂಯಮಿಯು–
ಇಂತಹ ನಿಮೇಷಗಳ ಸಾಧನೆಗೆ ಬದುಕ ನೀಡುವನು.
ಆದರೂ ಆಗುವುದೊ ಇಲ್ಲೊ –
ಒಂದರೆನಿಮಿಷ !
ಆ ಮಹಾತ್ಮಸ್ವರೂಪದರಿವು !! ಆ ಇಡಿಯ–
ಬದುಕಿನಲ್ಲಿ !!!
ಇವರು ಕೌರವರಂತು
ಸಕಲ ಐಹಿಕ ಭೋಗದಿಂದೆ ಮೋಹಾಂಧ–
ರಾಗಿರುವರೀಗ.
ಎಂತರಿಯಬಲ್ಲರಾ ಪರರೂಪವನ್ನು !!!
(ಕಂಚುಕಿಗೆ:–) ಆರ್ಯ
ಗುರುಜನಗಳೀಗ ಏನು ಅನ್ನುವರು,

**ಕಂಚುಕಿ:–**

ನಾನು ಆ ಕೂಡಲೇ ಹೊರಟು ಬಂದೆ
ಅದಕಾಗಿ ತಿಳಿಯದದು ನನಗೆ,
ತಿಳಿದೀತು ? ತಾವೆ ದಯಮಾಡಿಸಲು
ನಾನಿನ್ನು ಹೊರಡಲೇ ?

**ಭೀಮ:–** ಆಗಬಹುದು.

ಆಹ್ವಾನ

( ಕಂಚುಕಿಯು ನಮಿಸಿ ಹೊರಡುವನು, ನೇಪಥ್ಯದಲ್ಲಿ
ಪುನಃ ಮಹಾ ಕೆಲಕಲ ಧ್ವನಿಯೂ ಅದರೊಡನೆ ಈ ಕೂಗೂ
ಕೇಳಬರುವುದು–)

ಎಲೆ ಎಲೇ ?

ದ್ರುಪದ ವಿರಾಟ ವೃಷ್ಣ್ಯಂಧಕ ಸಹದೇವಾದಿ
ಪಾಂಡವ ಪಕ್ಷವೀರರೇ !

ಮಗಧ, ಅಂಗ, ಶಲ್ಯ ದೇಶಾದಿ

ಕೌರವಪಕ್ಷವುೂ ಪ್ರಧಾನಯೋಧರಿರಾ

ಮತ್ತೂ

ಕೃಪದ್ರೋಣಾದಿ ಗುರುಜನಗಳೇ

ಕೇಳಿ

ಯಾವುದು–

ನನ್ನ ನನ್ನಿಯ ಸೊಂಪಿಗಾಗಿ–

ಭಂಗ ಬರದಿರಲೆಂಬ ಭಯದಿಂದೆ ಸಂದಿಸಲು

ನಾನಂದು, ಬಯಸಿದ್ದೆನೋ !!

ಯಾವುದನು–

ಮಾನವ್ಯಕುಲದ ಕ್ಷೇಮಕ್ಕಾಗಿ–

ಮರೆಯಲೂ ಹಿಂಜರೆಯನೋ !!

ಅಂಥ ಆ–

ದ್ಯೂತವೆನ್ನುವ ಅರಣಿಯಿಂದೆ ಸಂಜನಿಸಿದುರ್
ಯೋಣಂದು ಆ ಧೀರ–ವೀರಪುತ್ರಿಯ–ಆ ಧೀರ
ವೀರಸ್ನುಷೆಯ–ಆ ಧೀರ ವೀರಪತ್ನಿಯ–
ಆ ಧೀರವೀರ ಮಾತೆಯ–ಆ ಧೀರ–ವೀರ
ಮಾನಿನಿಯ–ಕೇಶಾಂಬರಾಕರ್ಷಣದ–
ಘರ್ಷಣದಿ ಪಚಿಸಿದ –ಈ ಯುಧಿಷ್ಠಿರ ಕೋಪ

ದಾವಾಗ್ನಿ, ಕೌರವ್ಯವನದಾಹಕಾಗಿ
ಜ್ವಾಲೆಗಳ ಚಾಚುತಿಹುದು!!!
ಯಾರಿಹಿರಿ ಭುವಿಯಲ್ಲಿ
ಸತ್ಪಕ್ಷಪಾತಿಗಳು ?
ಏಳಿರೀಗ
ಅಸತ್ಯ-ಅನ್ಯಾಯುಗಳನು ಈ ಭುವಿಯಿಂದೆ
ಹೊಡೆದುಹಾಕಲು ಇಂದು ಸಂಗರಕೆ-
ಸಜ್ಜಾಗಿರಿ !!
ಇದುವೆ ಈ ಯೌಧಿಷ್ಠಿರಾಹ್ವಾನ !!?

**ಭೀಮ:**– (ಹರ್ಷೋದ್ರೇಕದಿಂದ)
ಬರಿದೆ ಚಾಚುವುದೇಕೆ ?
ಆರ್ಯಕೋಪಜ್ವಾಲೆ !
ಕುರುವನವ ದಹಿಸಲಾರಂಭಿಸಲಿ !
[ಸಹದೇವನಿಗೆ]
ಸಹದೇವಾ ?
ಕೇಳಿಸದೆ ಆಹ್ವಾನ ?

**ಸಹದೇವ:**– ಆರ್ಯ ಕೇಳಿಸಿತು ?
ಇದೊ ಹೊರಟೆ.
(ಹೊರಡುವನು)

**ದ್ರೌಪದಿ:**– ಪ್ರಭುವೆ,
ಮೇಲಿಂದಮೇಲೆ ಅದೇತಕ್ಕೆ ಈಗ,
ಈ ದುಂದುಭಿಯು ನಿನದಿಸುತ್ತಿಹುದು,

**ಭೀಮ:**– ನಲ್ಲೇ,
ಭುವಿಯಲ್ಲಿ ಸಂಗರಾಧ್ವರವೊಂದು

ನಡೆಯುತಿದೆ ಯೀಗ ? ಆ ಯಾಗಾಭಿ
ಮಾನಿಗಳ ಆಹ್ವಾನಕಾಗಿ–
ಈ ದುಂದುಭಿಯು ನಿನದವಿಹುದು ?

**ದ್ರೌಪದಿ:–** ಏನೂ ?
ರಣಯಜ್ಞ !! ಹೋತೃವಾರು? ಹೋಮಿಸುವುದೇನನ್ನು ?

**ಭೀಮ:–** ಕೇಳು ಎಲೆ ದೇವಿ,
ಹೋತೃ ಯಮಸೂನು ? ಅವನ, ಸಾಲ್ವರು–
ನಾವು ತಮ್ಮದಿರು ಋತ್ವಿಜರು, ಧರ್ಮಜನ
ಭಾರ್ಯೆ ಯಾಜ್ಞಸೇನೆಯು ಮುಂಚೆ
ಎಂದಿನಿಂದಲೊ ತಾನು ವ್ರತಸ್ಥಳಾಗಿಹಳು.
ಭಗವಾನ್ ವಾಸುದೇವನು ತಾನು
ಕರ್ಮೋಪದೇಶಕನು ?
ಕುರುಕುಲದ ನೂರೊಂದು ಪಶುಗಳೇ
ಇಲ್ಲಿ ಪ್ರಧಾನ ಹೋಮದ್ರವ್ಯ.
ಇದಲ್ಲದಲೆ
ಅಂತರಿಕ್ಷ ಆಹುತಿಗಾಗಿ ಕಾದಿಹುದು
ಕುರುಜನೌಘ ಸಮೂಹವನ್ನು !
ಮೇಣಿಲ್ಲಿ
ಭಾರ್ಯಾಪಮಾನ ಶಾಂತಿಯೆ ಫಲ.
( ಉದ್ಬೋಧಕ ಸ್ವರದಿಂದೆ)
ಎಲೆಗೆ ರಣದೇವೀ,
ಸಂತಸವು ಜನಿಸಿಹುದೆ ನಿನ್ನಲ್ಲಿ ಈಗ,
ಬಾ ಇಲ್ಲಿ
ದೂರೇಕೆ

## ಆಹ್ವಾನ

ನಿನ್ನ ಸಂಸ್ಪರ್ಶ! ಸಂಜೀವಿಸಲಿ ಸ್ಫೂರ್ತಿಯನು
ನವ್ಯೋನವವಾಗಿ.

( ಕೂಡಲೇ ದ್ರೌಪದಿಯು ಅಪ್ಪುಗೆಯನಿತ್ತು ಭೀಮ ಭುಜಬಂಧನದಲ್ಲಿ
ಕೊಂಚ ಹಿಂದಕ್ಕೆ ಮಣಿದು, ಆ ವಾಯುನಂದನನ
ಮುಖವನ್ನು ತನ್ನ ಕರಕಮಲಗಳಿಂದೆ ಸುತ್ತಿ-)

ಎಲೆ ರಮಣ!
ಕಾಲಯಾಪನೆ ಬೇಡ.
ಮೀರೀತು ಸುಮುಹೂರ್ತ ??
ನಿಮ್ಮ ಈ ಅಧ್ವರವು-
ಸಂಪೂರ್ಣವಾಗಲಿ ತಾನು !
ನಿರ್ವಿಘ್ನವಾಗಿ !
ಕುರುಕುಲಾಗ್ರಜ ನೂರು ಶೋಣಿತದಝುರಿಯಲ್ಲಿ
ಅವಭೃತವಗ್ಗೈದು-
ನಿನ್ನ ಈ ದೇವಿಯನು ಕಾಣು

ನಿಮಗಕ್ಕೆ ಜಯಂ
ಭದ್ರಂ
ಶುಭಂ
ಮಂಗಲಂ.

---

# ಮುಂಬಯಿ ಪ್ರಾಂತದ

# ಹೊಲ-ಸಾಗುವಳಿ (ಟೆನನ್ಸಿ) ಕಾಯದೆ

# Bombay Tenancy Act 1939

(as amended by Bombay Act XXVI of 1946)

---

ಸಂಪಾದಕ:

**ವೆಂಕಟೇಶ ಭೀಮರಾವ ನಾಯಕ**

ಎಂ. ಎ., ಎಲೆಲ್. ಬಿ.

ತಿದ್ದಿದ ಎರಡನೇ ಆವೃತ್ತಿ



**ಬೆಲೆ : ಒಂದು ರೂಪಾಯಿ ಮಾ**